ಣೆ

# ಭಜನ ಸಹಸ್ರನಾಮಾವಳಿ.





ಪ್ರಕಾಶಕರು

ಕೃಷ್ಣ ಉಪಾಧ್ಯಾಯ

ಕಾರ್ಕಳ, ದ. ಕ.

ಬೆಲೆ 30 ನ. ಪೈ.

# ಶ್ರೀ ರಾಮಕೃಷ್ಣ
# ಭಜನ ಸಹಸ್ರ ನಾಮಾವಲಿ.





ಲೇಖಕಿ:-
ಕೆ. ಕಮಲಾಕ್ಷಮ್ಮ.

1958.

ಪ್ರಕಾಶಕರು.
ಕೆ. ವ್ಯಾಸಕೃಷ್ಣ ಉಪಾಧ್ಯಾಯ
ಕಾರ್ಕಳ.

# ಅರ್ಪಣೆ.

**ಶ್ರೀ ಪುತ್ತಿಕಾ ಮಠದ ಶ್ರೀ ನರಹರಿ**
ದೇವರ ಸನ್ನಿಧಿಯಲ್ಲಿ ಧರ್ಮದರ್ಶಿಗಳಾಗಿದ್ದು
ಸ್ವರ್ಗಸ್ಥರಾದ ಪತಿ ದೇವರ ಪುಣ್ಯಸ್ಮರಣೆಗೆ
ಅರ್ಪಣೆ.

ವಿಳಂಬಿ ಮಾಘ
ಶು। ಷಷ್ಠಿ.

ನುತಿಸಿದಾತೆ,
**ಕೆ. ಕಮಲಾಕ್ಷಮ್ಮ.**

**ಈ** ಪದ್ಯಮಾಲಿಕೆಯನ್ನೋದಿ ತಪ್ಪು ಒಪ್ಪುಗಳನ್ನು ಸೌಹಾರ್ದದಿಂದ ತೋರಿಕೊಟ್ಟ ಸುರತ್ಕಲ್ ವಿದ್ಯಾದಾಯಿನಿ ಪ್ರೌಢ ಶಾಲೆಯ ಹಿರಿಯ ಕನ್ನಡ ಪಂಡಿತರಾಗಿರುವ **ಶ್ರೀ ಪದ್ಮನಾಭ ಸೋಮಯಾಜಿ**ಗಳಿಗೂ, ಸಂಪ್ರೀತಿಯಿಂದ ಪ್ರಸ್ತಾವನೆಯನ್ನು ಬರೆದ **ಶ್ರೀ. ಕೆ. ಎಲ್. ಎನ್ ಉಪಾಧ್ಯಾಯ**ರಿಗೂ ನಾನು ಚಿರ ಅಭಾರಿಯಾಗಿದ್ದೇನೆ.

**ಲೇಖಕಿ.**

# ಮೊದಲನುಡಿ.

ವ್ರಜಕಿಶೋರ ಶ್ರೀಕೃಷ್ಣಪರಮಾತ್ಮನ ಲೀಲಾ ಚರಿತದ ಪುಣ್ಯ ಪೀಯೂಷವನ್ನು ಸವಿದು, ಧನ್ಯತೆಯೊದಗಿಸಲು ಈ ಪದ್ಯಮಾಲಿಕೆಯು ಸಹಾಯವಾಗುವುದು. ಬಾಲ್ಯದಲ್ಲಿ ಮಕ್ಕಳ ತೊದಲ್ನುಡಿಯಲ್ಲಿ ಅಕ್ಷರಮಾಲೆಯ ಒಂದೊಂದಕ್ಷರವೂ ಒಡೆದು ಮೂಡುವಂತೆ, ಅಕ್ಷರಮಾಲೆಯು ಪವಣಿಸಲ್ಪಟ್ಟಿದೆ. ಅದರಲ್ಲಿ ಶ್ರೀಕೃಷ್ಣ ಚರಿತದೊಡನೆ ಶ್ರೀರಾಮ ಚರಿತವೂ ಧಾರಾವಾಹಿಯಾಗಿ ಹರಿದಿದೆ. ಕೇಶವಾದಿ ದ್ವಾದಶನಾಮಗಳೂ, ಕೀರ್ತಿಸಲ್ಪಟ್ಟಿವೆ. ದಶಾವತಾರ ಮಹಿಮೆಯೂ ಇಲ್ಲಿ ಬರೆದಿರುವದು. ಶ್ರೀಕೃಷ್ಣನ ಲೀಲಾ ವಿನೋದಗಳು ಇವೆಲ್ಲಕ್ಕೂ ಶೇಖರವಾಗಿ ಮೆರೆಯುವುದು. ಭಕ್ತಿಯ ಆವಿರ್ಭಾವಕ್ಕೆ ಈ ಮಹಿಮಾನ್ವಿತವಿಭೂತಿಕಥೆಗಳು ಅತ್ಯಗತ್ಯವಾಗಿವೆ. ಶ್ರೀಪಾದರಾಜರು ತಮ್ಮ ಉಗಾಭೋಗಗಳಲ್ಲಿ ಕಲಿಕಾಲದಲ್ಲಿ ನಾಮಸ್ಮರಣದ ಮಹಾತ್ಮ್ಯವನ್ನು ತೋರಿಸಿಕೊಟ್ಟಿರುವರು. ಕಲಿಕಾಲದಲ್ಲಿ ನಾಮಸ್ಮರಣ ಯಜ್ಞದಿಂದ ಓರ್ವನು ಸಾಯುಜ್ಯವನ್ನು ಹೊಂದಬಹುದೆಂದ ಬಳಿಕ ಕಲಿಕಾಲದಲ್ಲಿ ಜನ್ಮವೆತ್ತಿದೆವೆಂದು ಚಿಂತಿಸಲೇಕೆ?

ಕಲಿಕಾಲಕೆ ಸಮಯುಗ ವಿಲ್ಲವಯ್ಯ ।
ಕಲುಷಹರಿಸಿ ಕೈವಲ್ಯವನೀವುದಯ್ಯ ।
ಸಲೆನಾಮಕೀರ್ತನೆ ಸ್ಮರಣೆ ಸಾಕಯ್ಯ ।
ಸ್ಮರಿಸಲು ಸಾಯುಜ್ಯ ಪದವೀವುದಯ್ಯ ।
ಬಲವಂತ ಶ್ರೀ ರಂಗವಿಠಲನ ನೆನೆದರೆ ।
ಕಲಿಯುಗ ಕೃತಯುಗ ವಾಗುವುದಯ್ಯಾ ।

ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನು ಭಕ್ತಿಯೋಗದಲ್ಲಿ ನಾಮ ಸಂಕೀರ್ತನವು ಮುಖ್ಯವಾದ ಸ್ತರವೆಂದು ನಿರೂಪಿಸಿರುವನು.

ಮಹಾತ್ಮನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।
ಭಜಂತ್ಯನನ್ಯಮನಸಃ ಜ್ಞಾತ್ವಾ ಭೂತಾದಿಮವ್ಯಯ ॥
ಸತತಂ ಕೀರ್ತಯಂತೋಮಾಂ ಯತಂತಶ್ಚ ದೃಢವ್ರತಾಃ ।
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥

ನಾಮಸ್ಮರಣೆಯನ್ನು ಒಂದು ಯಜ್ಞವೆಂದೇ

ಯಜ್ಞೈಃಸಂಕೀರ್ತನ ಪ್ರಾಯೈರ್ಯಜಂತಿಸ್ಮ ಸುಮೇಧಸಃ ॥

ಎಂದು ಶ್ರೀ ಮನ್ಮಧ್ವಾಚಾರ್ಯರು ಆದೇಶವಿತ್ತಿರುವರು.

ಈ ಕಿರು ಹೊತ್ತಗೆಯು ಮನೆಮನೆಯಲ್ಲಿ ಸ್ತ್ರೀಪುರುಷರಾದಿಯಾಗಿ ಎಲ್ಲರಿಗೂ ಭಕ್ತಿಯ ನಂದಾದೀಪವಾಗಿ ದಾರಿಯನ್ನು ಬೆಳಗಲಿ.

ಪ್ರಸ್ತುತ ಲೇಖಕಿಯರು ತಮ್ಮ ಪ್ರತಿಭೆಯನ್ನು ದೇವರಿಗೆ ಅರ್ಪಿಸುವಲ್ಲಿ ಈ ಸುಮಾಂಜಲಿಯನ್ನು ಎತ್ತಿ ಹಿಡಿದಿರುವರು. ಸ್ತ್ರೀಯರ ಹೃದಯದಲ್ಲಿ ಅಡಗಿರುವ ಅಪಾರವಾದ ಕರುಣೆ, ಕ್ಷಮೆ ಸಹಾನುಭೂತಿ ಮತ್ತು ಪ್ರವೃಣತೆ ಮುಂತಾದ ದೈವೀಗುಣಗಳು ಈ ನವೋದಯವನ್ನೂ ಪಡೆದಿರುವ ನಮಗೆ ಅತ್ಯಂತ ಸಂತೋಷವನ್ನುಂಟು ಮಾಡಿರುವದು. ಅವರ ಕ್ರಿಯಾಶಕ್ತಿಯು ಈ ಅಮರಪಥದಲ್ಲಿ ಮುನ್ನಡೆಯುತ್ತಿರಲೆಂದು ಶ್ರೀ ದೇವರನ್ನು ಪ್ರಾರ್ಥಿಸುತ್ತೇವೆ.

ಅರ್ಪಣೆಯಲ್ಲಿ ಮಿಗಿಲಾದುದು ಶುದ್ಧ ಸತ್ವವೆನಿಸಿದ ನಾಮಸ್ಮರಣೆಯೊಂದೇ ಎಂದು ನಮ್ಮೆಣಿಕೆ. ಆ ನಾಮಸ್ಮರಣೆಗೆ ಬೆಲೆ ಕಟ್ಟಲು ಭೌತಿಕ ಪ್ರಪಂಚದಲ್ಲಿ ಯಾವುದೂ ದೊರೆಯಲಾರದು. ಏಕೆಂದರೆ ಅದು ನಾದಮಯ. ಆ ನಾದವು ನಾದಲೋಲನಿಗೆ ಅರ್ಪಿತವಾದಾಗ ಅದು ಅನಂತವಾಗಿ ಆತ್ಮವನ್ನು ಭಾವದ ಕಡೆಗೆ

ಒಯ್ಯುವದು. ಆ ದೃಷ್ಟಿಯಿಂದ ಪತಿದೇವನಿಗೆ ಇದನ್ನು ಅರ್ಪಿಸಿ-ದುದರಿಂದ ಪ್ರಸ್ತುತ ಲೇಖಕಿಯರು ಮಹಾಋಣದಿಂದ ಮುಕ್ತಗೊಂಡು ಅನಂತ ಪುಣ್ಯ ಭಾಗಿಗಳಾಗುವರೆಂದು ಆಶಿಸುತ್ತೇವೆ. ಅಂಥ ಶುದ್ಧ ಸತ್ವಕ್ಕೆ ನಮೋ ಎಂದು ವಿರಮಿಸುತ್ತೇವೆ.

ಶ್ರೀನಿವಾಸ,
ವಿಲಂಬಿ, ಭಾದ್ರಪದ
ಶುದ್ಧ ಚೌತಿ.

ಕೆ. ಎಲ್. ಎನ್. ಉಪಾಧ್ಯಾಯ.





|| ಶ್ರೀ ಗುರುಭ್ಯೋ ನಮಃ ||

# ಪ್ರಾರ್ಥನೆ.

ಪರಿಗುರುಹಿರಿಯರ ಸ್ಮರಿಸಿ ಗಣೇಶ |
ನಿಗೆರಗಿ ಹರುಷದಲಿ ಬರೆಯುವೆನೂ ||
ಮಾತೆ ಸರಸ್ವತಿ ಜಿಂಹ್ವೆಯೊಳ್ನಿಲಸುತ |
ರಮ್ಯದಿ ನುಡಿಸುತ ಪೊರೆ ನೀನೂ ||

## I. ಅಕ್ಷರಮಾಲೆ.

## [ಭಗವಂತನ ಅವತಾರಲೀಲೆಗಳಲ್ಲಿ]

ರಾಮ ರಾಮ ಜಯ ರಾಮ ರಾಮ ಜಯ |
ರಾಮ ರಾಮ ಸೀತಾ ರಾಮಾ ||
ಕೃಷ್ಣ ಕೃಷ್ಣ ಹರಿ ಕೃಷ್ಣ ಕೃಷ್ಣ ಶ್ರೀ |
ಕೃಷ್ಣ ಕೃಷ್ಣ ರಾಧಾಕೃಷ್ಣ || ೧ ||
ಅಜಭವ ಕಾರಣ ಸಾಕೇತದಿ ಕೌ |
ಸಲ್ಯೆಯೊಳ್ಜನಿಸಿದ ಶ್ರೀರಾಮಾ ||
ಆಶ್ರಿತರೊಳ್ಬಹು ಲೀಲೆಯ ತೋರುತ |
ಮಧುರೆಯೊಳುದಿಸಿದ ಶ್ರೀಕೃಷ್ಣ || ೨ ||
ಇನಕುಲತಿಲಕನು ಘನಮಹಿಮನು |
ಬಹು ಮುನಿಜನವಂದಿತ ಶ್ರೀರಾಮಾ ||

**ಈ**ಕ್ಷಿಪ ಮಾತೆಗೆ ವಿಶ್ವವ ತೋರುತ ।
ಹರುಷವ ತೋರಿದ ಶ್ರೀಕೃಷ್ಣ ॥ ೩ ॥
**ಉ**ರಗಶಯನ ಮುನಿಕೌಶಿಕನೊಂದಿಗೆ ।
ತೆರಳಿದ ಹರುಷದಿ ಶ್ರೀರಾಮಾ ॥
**ಊ**ರ್ವಶಿಯೊಳ್ಬಹುಲೀಲೆಯ ತೋರಿ ಗೋ ।
ಕುಲಕೇ ತೆರಳಿದ ಶ್ರೀಕೃಷ್ಣ ॥ ೪ ॥
**ಋ**ಷಿಗಳ ಯಜ್ಞವ ಸರಸದಿ ನಡೆಸಿದ ।
ಅಸಮ ಸಾಹಸಿಯು ಶ್ರೀರಾಮಾ ॥
ಎಸವ ಶ್ರೀಕೃಷ್ಣನು ವಿಷವನು ಹೀರುತ ।
ಅಸುರೆಯ ಕೊಂದನು ಶ್ರೀಕೃಷ್ಣ ॥ ೫ ॥
**ಏ**ನೆಂದುಸುರಲಿ ಘೋರತಾಟಕಿಯ ಸಂ ।
ಹಾರವ ಮಾಡಿದ ಶ್ರೀರಾಮಾ ॥
**ಐ**ವರ ಪೊರೆಯುತ ಸಾರಥಿತನದಿ ಭೂ ।
ಭಾರವ ನಿಳುಹಿದ ಶ್ರೀಕೃಷ್ಣ ॥ ೬ ॥
**ಒ**ಡ್ಡೋಲಗದಲಿ ಶಿವಧನು ಮುರಿದು ।
ಸೀತೆಯ ತಂದನು ಶ್ರೀರಾಮಾ ॥
**ಓ**ಲೈಸುತ ಬಲುಲೀಲೆಯೊಳ್ಗೊಲ್ಲರ ।
ಕೂಡುತ ನಲಿದನು ಶ್ರೀಕೃಷ್ಣ ॥ ೭ ॥
**ಔ**ರಸ ಪ್ರೇಮದಿ ಆಶ್ರಿತರನು ಬಹು ।
ಕರುಣದಿ ಪೊರೆದನು ಶ್ರೀರಾಮಾ ॥
**ಅಂ**ದುಗೆ ಅರಳೆಲೆ ಧರಿಸುತ ಮೋದದಿ ।
ಚಂದದಿ ನಲಿದನು ಶ್ರೀಕೃಷ್ಣ ॥ ೮ ॥
**ಅ**ಹಲ್ಯಶಾಪವಿಮೋಚನೆ ಗೈದು ।

ಪೊರೆದನು ಕರುಣದಿ ಶ್ರೀರಾಮಾ ||
ಕಮಲಲೋಚನ ಪ್ರೇಮದಿ ಕುಬ್ಜೆಯ |
ತನುವನು ತಿದ್ದಿದ ಶ್ರೀಕೃಷ್ಣ || ೯ ||
ಖರದೂಷಣ ಸಂಹಾರವ ಮಾಡಿದ |
ವನಜದಳಾಕ್ಷನು ಶ್ರೀರಾಮಾ ||
ಗರುಡಗಮನ ಬಹುಪರಿಯೊಳು ದುಷ್ಟರ |
ಹರಣವ ಮುರಿದನು ಶ್ರೀಕೃಷ್ಣ || ೧೦ ||
ಘನಮಹಿಮನು ಪಿತ ವಚನವ ಪಾಲಿಸೆ |
ವನಕೆ ತೆರಳಿದನು ಶ್ರೀರಾಮಾ ||
ಚಂದದಿ ಮಾತೆಯ ಬಂಧನ ಬಿಡಿಸಿದ |
ಕಂದರ್ಪನ ಪಿತ ಶ್ರೀಕೃಷ್ಣ || ೧೧ ||
ಛತ್ರಕಿರೀಟವ ತ್ಯಜಿಸುತ ಪೋದನು |
ಮುನಿಗಳ ತೆರದಲಿ ಶ್ರೀರಾಮಾ ||
ಜಗದೊಳು ಬಹುಪರಿ ಲೀಲೆಯ ತೋರಿದ |
ಅಗಣಿತ ಮಹಿಮನೆ ಶ್ರೀಕೃಷ್ಣ || ೧೨ ||
ಝುಂಕಾರದಿ ಧನು ಪಿಡಿದಿಹ ದುರುಳರ |
ಬಿಂಕವ ಮುರಿದನು ಶ್ರೀರಾಮಾ ||
ಜ್ಞಾನಿಗಳುದರದಿ ಪ್ರೇಮದಿ ನಲಿಯುವ |
ದೇವಕಿ ನಂದನ ಶ್ರೀಕೃಷ್ಣ || ೧೩ ||
ಟಗರಿನ ತೆರದೊಳು ಮದಮುಖರನು ಬಹು |
ವಿಧದಲಿ ಕೊಂದನು ಶ್ರೀರಾಮಾ ||
ಠಂಠನಾದದಿ ಕಾಳಿಯ ಫಣೆಯೊಳು |
ಬಿಂಕದಿ ನಲಿಯುವ ಶ್ರೀಕೃಷ್ಣ || ೧೪ ||

**ಡ**ಮರುವ ಧರಿಸಿಹ ಭವನೂ ಪೊಗಳುವ ।
ದಿನಕರ ತೇಜನು ಶ್ರೀರಾಮಾ ॥
**ಢ**ಂಡಂ ಭೇರಿಯ ಬಾರಿಸುತ ಜರಾ ।
ಸಂಧನ ಕೊಲಿಸಿದ ಶ್ರೀಕೃಷ್ಣ ॥ ೧೫ ॥

**ತ**ಂದೆಯಂತೆ ಭವ ಬಂಧನ ಬಿಡಿಸುವ ।
ಸುಂದರ ಮೂರುತಿ ಶ್ರೀರಾಮಾ ॥
**ಥ**ರಥರ ನಡುಗುವ ತರಳೆಗೆ ಅಭಯವ ।
ನಿತ್ತನು ಕರುಣದಿ ಶ್ರೀಕೃಷ್ಣ ॥ ೧೬ ॥

**ದ**ನುಜರನೆಲ್ಲರ ಅನುಜನ ಕೂಡುತ ।
ಭರದಲಿ ಕೊಂದನು ಶ್ರೀರಾಮಾ ॥
**ಧ**ರಣಿಯ ಭಾರವ ನಿಳುಹಲು ದುಷ್ಟರ ।
ಹರಣವ ಮುರಿದನು ಶ್ರೀಕೃಷ್ಣ ॥ ೧೭ ॥

**ನ**ದಿಯೊಳು ಗುಹನಲಿ ಕರುಣವ ತೋರುತ ।
ಅಭಯವನಿತ್ತನು ಶ್ರೀರಾಮಾ ॥
**ಪ**ಶುಪತಿ ಮಿತ್ರನೆ ವಸುದೇವ ಪುತ್ರನೆ ।
ಶಶಿಮುಖಿಯರಸನೆ ಶ್ರೀಕೃಷ್ಣ ॥ ೧೮ ॥

**ಫ**ಣಿಶಾಯಿಯೆ ಗುಣನಿಧಿ ಶಬರಿಯೊಳೂ ।
ಕರುಣವ ತೋರಿದೆ ಶ್ರೀರಾಮಾ ॥
**ಬ**ಂಧನ ಬಿಡಿಸುತ ಚಂದದಿ ಪೊರೆಯುವ ।
ಕಂದರ್ಪನ ಪಿತ ಶ್ರೀಕೃಷ್ಣ ॥ ೧೯ ॥

**ಭ**ವ ಬಿಡಿಸುತ ವನ ಪಕ್ಷಿಗೆ ಮುಕ್ತಿಯ ।
ನಿತ್ತನು ಕರುಣದಿ ಶ್ರೀರಾಮಾ ॥
**ಮ**ನ್ಮಥ ಜನಕನು ಮಲ್ಲರನೆಲ್ಲರ ।

ಲೀಲೆಯೊಳ್ನೊಂದನು ಶ್ರೀಕೃಷ್ಣ ‖ ೨೦ ‖

**ಯ**ಜ್ಞವ ಕೆಡಿಸುವ ದುಷ್ಟರ ಸೀಳುತ ।
ಋಷಿಗಳ ಕ್ಯಾದನು ಶ್ರೀರಾಮಾ ‖
**ರ**ಕ್ಕಸರೆಲ್ಲರ ಮುರಿಯುತ ಭಕ್ತರ ।
ಇಷ್ಟವ ಸಲಿಸಿದ ಶ್ರೀಕೃಷ್ಣ ‖ ೨೧ ‖

**ಲ**ಕ್ಷ್ಮಣನೊಂದಿಗೆ ಕಿಷ್ಕಿಂಧೆಯೊಳು ।
ಸುಗ್ರೀವನ ಸಖ ಶ್ರೀರಾಮಾ ‖
**ವ**ರದ ಅಕ್ರೂರಗೆ ನಿಜವನು ತೋರಿದ ।
ಪರಮ ದಯಾನಿಧಿ ಶ್ರೀಕೃಷ್ಣ ‖ ೨೨ ‖

**ಶ**ಶಿಮುಖಿ ಸೀತೆಯನರಸಲು ವಾನರ ।
ಹನುಮನ ಕಳುಹಿದ ಶ್ರೀರಾಮಾ‖
**ಷ**ಡ್ಗುಣ ಭರಿತನು ಮುದ್ದು ಶ್ರೀಕೃಷ್ಣನು ।
ಉದ್ಧವ ಸಖನೂ ಶ್ರೀಕೃಷ್ಣ ‖ ೨೩ ‖

**ಸ**ರಸದಿ ಪೋಗೀ ಶರಧಿಗೆ ಸೇತುವ ।
ರಚಿಸಿದ ಭರದಲಿ ಶ್ರೀರಾಮಾ ‖
**ಹ**ರುಷದಿ ವಿದುರನೊಳ್ ಕ್ಷೀರವ ಕುಡಿದು ।
ಮಹಿಮೆಯ ತೋರಿದ ಶ್ರೀಕೃಷ್ಣ ‖ ೨೪ ‖

**ಅ**ಖಿಳ ಸ್ವರೂಪನೆ ಅದ್ಭುತ ಮಹಿಮನೆ ।
ದಿನಕರ ತೇಜನೆ ಶ್ರೀರಾಮಾ ‖
**ಕ್ಷ**ಮಿಸುತ ಶರಣರ ಅಪರಾಧಗಳನು ।
ಕರುಣದಿ ಪೊರೆಯುವ ಶ್ರೀಕೃಷ್ಣ ‖ ೨೫ ‖

**ಜ್ಞಾ**ನ ನಿಧಿಯೆ ಅಜ್ಞಾನದಿ ತೊಳಲುವ ।
ದೀನಳ ಪೊರೆಯೊ ಶ್ರೀರಾಮಾ ‖

**ಡ**ಮರುವ ಧರಿಸಿಹ ಭವನೂ ಪೊಗಳುವ ।
ದಿನಕರ ತೇಜನು ಶ್ರೀರಾಮಾ ॥
**ಢ**ಂಡಂ ಭೇರಿಯ ಬಾರಿಸುತ ಜರಾ ।
ಸಂಧನ ಕೊಲಿಸಿದ ಶ್ರೀಕೃಷ್ಣ ॥ ೧೫ ॥

**ತ**ಂದೆಯಂತೆ ಭವ ಬಂಧನ ಬಿಡಿಸುವ ।
ಸುಂದರ ಮೂರುತಿ ಶ್ರೀರಾಮಾ ॥
**ಥ**ರಥರ ನಡುಗುವ ತರಳೆಗೆ ಅಭಯವ ।
ನಿತ್ತನು ಕರುಣದಿ ಶ್ರೀಕೃಷ್ಣ ॥ ೧೬ ॥

**ದ**ನುಜರನೆಲ್ಲರ ಅನುಜನ ಕೂಡುತ ।
ಭರದಲಿ ಕೊಂದನು ಶ್ರೀರಾಮಾ ॥
**ಧ**ರಣಿಯ ಭಾರವ ನಿಳುಹಲು ದುಷ್ಟರ ।
ಹರಣವ ಮುರಿದನು ಶ್ರೀಕೃಷ್ಣ ॥ ೧೭ ॥

**ನ**ದಿಯೊಳು ಗುಹನಲಿ ಕರುಣವ ತೋರುತ ।
ಅಭಯವನಿತ್ತನು ಶ್ರೀರಾಮಾ ॥
**ಪ**ಶುಪತಿ ಮಿತ್ರನೆ ವಸುದೇವ ಪುತ್ರನೆ ।
ಶಶಿಮುಖಿಯರಸನೆ ಶ್ರೀಕೃಷ್ಣ ॥ ೧೮ ॥

**ಫ**ಣಿಶಾಯಿಯೆ ಗುಣನಿಧಿ ಶಬರಿಯೊಳೂ ।
ಕರುಣವ ತೋರಿದೆ ಶ್ರೀರಾಮಾ ॥
**ಬ**ಂಧನ ಬಿಡಿಸುತ ಚಂದದಿ ಪೊರೆಯುವ ।
ಕಂದರ್ಪನ ಪಿತ ಶ್ರೀಕೃಷ್ಣ ॥ ೧೯ ॥

**ಭ**ವ ಬಿಡಿಸುತ ವನ ಪಕ್ಷಿಗೆ ಮುಕ್ತಿಯ ।
ನಿತ್ತನು ಕರುಣದಿ ಶ್ರೀರಾಮಾ ॥
**ಮ**ನ್ಮಥ ಜನಕನು ಮಲ್ಲರನೆಲ್ಲರ ।

ಲೀಲೆಯೊಳ್ಕೊಂದನು ಶ್ರೀಕೃಷ್ಣ ॥ ೨೦ ॥
**ಯ**ಜ್ಞವ ಕೆಡಿಸುವ ದುಷ್ಟರ ಸೀಳುತ ।
ಋಷಿಗಳ ಕ್ಕಾದನು ಶ್ರೀರಾಮಾ ॥
**ರ**ಕ್ಕಸರೆಲ್ಲರ ಮುರಿಯುತ ಭಕ್ತರ ।
ಇಷ್ಟವ ಸಲಿಸಿದ ಶ್ರೀಕೃಷ್ಣ ॥ ೨೧ ॥
**ಲ**ಕ್ಷ್ಮಣನೊಂದಿಗೆ ಕಿಷ್ಕಿಂಧೆಯೊಳು ।
ಸುಗ್ರೀವನ ಸಖ ಶ್ರೀರಾಮಾ ॥
**ವ**ರದ ಅಕ್ರೂರಗೆ ನಿಜವನು ತೋರಿದ ।
ಪರಮ ದಯಾನಿಧಿ ಶ್ರೀಕೃಷ್ಣ ॥ ೨೨ ॥
**ಶ**ಶಿಮುಖಿ ಸೀತೆಯನರಸಲು ವಾನರ ।
ಹನುಮನ ಕಳುಹಿದ ಶ್ರೀರಾಮಾ ॥
**ಷ**ಡ್ಗುಣ ಭರಿತನು ಮುದ್ದು ಶ್ರೀಕೃಷ್ಣನು ।
ಉದ್ಧವ ಸಖನೂ ಶ್ರೀಕೃಷ್ಣ ॥ ೨೩ ॥
**ಸ**ರಸದಿ ಪೋಗೀ ಶರಧಿಗೆ ಸೇತುವ ।
ರಚಿಸಿದ ಭರದಲಿ ಶ್ರೀರಾಮಾ ॥
**ಹ**ರುಷದಿ ವಿದುರನೊಳ್ ಕ್ಷೀರವ ಕುಡಿದು ।
ಮುಕ್ತಿಮಯ ತೋರಿದ ಶ್ರೀಕೃಷ್ಣ ॥ ೨೪ ॥
**ಅ**ಖಿಳ ಸ್ವರೂಪನೆ ಅದ್ಭುತ ಮಹಿಮನೆ ।
ದಿನಕರ ತೇಜನೆ ಶ್ರೀರಾಮಾ ॥
**ಕ್ಷ**ಮಿಸುತ ಶರಣರ ಅಪರಾಧಗಳನು ।
ಕರುಣದಿ ಪೊರೆಯುವ ಶ್ರೀಕೃಷ್ಣ ॥ ೨೫ ॥
**ಜ್ಞಾ**ನ ಸಿಧಿಯೆ ಅಜ್ಞಾನದಿ ತೊಳಲುವ ।
ದೀನಳ ಪೊರೆಯೊ ಶ್ರೀರಾಮಾ ॥

**ಕ**ರುಣದಿ ನಿನ್ನಯ ನಾಮವ ಅಕ್ಷರ ।
ಮಾಲೆಯೊಳ್ಪರೆಸಿದೆ ಶ್ರೀ ಕೃಷ್ಣ ॥ ೨೬ ॥

**ದ**ಶಶಿರ ಕುಲಸಂಹರಿಸಿ ಸೀತೆಸಹಿತ ।
ಬಂದನಯೋಧ್ಯೆಗೆ ಶ್ರೀರಾಮಾ ॥
**ಕೌ**ರವಕುಲ ಸಂಹರಿಸುತ ಭೂಮಿಯ ।
ಭಾರವ ಕಳೆದನು ಶ್ರೀಕೃಷ್ಣ ॥ ೨೭ ॥

**ನ**ರಹರಿಯನು ಬಹು ಪರಿಯೊಳು ಸ್ಮರಿಸುತ ।
ಚರಣಕ್ಕೆ ಎರಗುವೆ ಶ್ರೀರಾಮಾ ॥
**ಸ**ರ್ವರ ಹೃದಯಕೆ ಶಾಂತಿಯ ನೀಡುತ ।
ಕರುಣದಿ ಪೊರೆಯೋ ಶ್ರೀಕೃಷ್ಣ ॥ ೨೮ ॥

## 2 ಕೇಶವಾದಿ ಇಪ್ಪತ್ತನಾಲ್ಕು ನಾಮಗಳು.

**ಕೇ**ಶವ ಸರ್ವರ ಕ್ಲೇಶವ ಕಳದೂ ।
ಪೋಷಿಪ ಗುಣನಿಧಿ ಶ್ರೀರಾಮಾ ॥
**ನಾ**ರಾಯಣ ನಿನ್ನ ನಾಮವ ಅಂತ್ಯದ ।
ಕಾಲದಿ ಕರುಣಿಸು ಶ್ರೀಕೃಷ್ಣ ॥ ೨೯ ॥

**ಮಾ**ಧವ ರೂಪನೆ ಶೂರ್ಪನಖಿಯ ಮೊಲೆ ।
ಮೂಗನೆ ಕೊಯಿದೆಯೊ ಶ್ರೀರಾಮಾ ।
**ಗೋ**ವಿಂದನೆ ಮುನಿವಂದಿತ ಹೃದಯ ।
ಮಂದಿರದೊಳು ನಲಿ ಶ್ರೀಕೃಷ್ಣ ॥ ೩೦ ॥

**ವಿ**ಷ್ಣುವೆ ಶರಣರ ಇಷ್ಟವ ಸಲಿಸುವ ।
ಶ್ರೇಷ್ಠ ಮೂರುತಿಯೆ ಶ್ರೀರಾಮಾ ।

**ಮ**ಧುಸೂದನನೇ ಮದನ ಜನಕನೆ ।
ಯದುಕುಲ ತಿಲಕನೆ ಶ್ರೀಕೃಷ್ಣ ॥ ೩೧ ॥

**ತ್ರಿ**ವಿಕ್ರಮನೆ ಮುನಿಗಳೊಲ್ಬಹುಪರಿ ।
ವಿನಯವ ತೋರಿದೆ ಶ್ರೀರಾಮಾ ॥
**ವಾ**ಮನ ರೂಪನೆ ದಾನವ ಬಲಿಯೊಳು ।
ದಾನವ ಬೇಡಿದೆ ಶ್ರೀಕೃಷ್ಣ ॥ ೩೨ ॥

**ಶ್ರೀ**ಧರ ಮೂರುತಿ ಶಿಲೆಯಾಗಿರುತಿಹ ।
ಹಲ್ಯೆಯ ಪೊರೆದೆಯೊ ಶ್ರೀರಾಮಾ ॥
**ಹೃ**ಷಿಕೇಶ ಬಹುಕುಶಲದಿ ಗೋವ್ಗಳ ।
ಕ್ಷ್ಯಾದನು ಹರುಷದಿ ಶ್ರೀಕೃಷ್ಣ ॥ ೩೩ ॥

**ಪ**ದ್ಮನಾಭ ಅಡ್ಡಬಿದ್ದು ನಾ ಬೇಡುವೆ ।
ಉದ್ಧರಿಸುತ ಪೊರೆ ಶ್ರೀರಾಮಾ ॥
**ದಾ**ಮೋದರ ನಿನ್ನ ನಾಮವ ಹೃದಯದಿ ।
ಪ್ರೇಮದಿ ನಿಲಿಸೊ ಶ್ರೀಕೃಷ್ಣ ॥ ೩೪ ॥

**ವಾ**ಸುದೇವನೆ ಶೇಷಶಾಯಿಯೆ ।
ಲೇಸಾಗಿ ಬೇಡುವೆ ಶ್ರೀರಾಮಾ
**ಸಂ**ಕರ್ಷಣ ಹರಿ ಶಂಕರಮಿತ್ರನೆ ।
ಕಿಂಕರರನು ಪೊರೆ ಶ್ರೀಕೃಷ್ಣ ॥ ೩೫ ॥

**ಪ್ರ**ದ್ಯುಮ್ನನೆ ಜಗದುದ್ಧಾರನೆ ಅತ್ರಿ ।
ಮುನಿಸತಿಗೊಲಿದೆಯೊ ಶ್ರೀರಾಮಾ ॥
**ಅ**ನಿರುದ್ಧನೆ ಹರಿ ಮುನಿಜನ ಪೂಜಿತ ।
ಚಿನ್ಮಯ ಮೂರುತಿ ಶ್ರೀಕೃಷ್ಣ ॥ ೩೬ ॥

**ಪು**ರುಷೋತ್ತಮನೆ ಪುಣ್ಯಪುರುಷನೆ ।
ಸನಕಾದಿ ವಂದ್ಯನೆ ಶ್ರೀರಾಮಾ ॥
**ಅ**ಧೋಕ್ಷಜ ಅಸುರಾಂತಕ ಭಕ್ತರ ।
ಹೃದಯದಿ ನಲಿಯುವ ಶ್ರೀಕೃಷ್ಣ ॥ ೩೭ ॥

**ನ**ರಸಿಂಹನೆ ನೀ ತರಳನ ಪೊರೆಯಲು ।
ಕಂಭದಿ ಬಂದೆಯೊ ಶ್ರೀರಾಮಾ ।
**ಅ**ಚ್ಚ್ಯುತ ಭಜಕರ ಚಿತ್ತವ ಬೆಳಗಿಸಿ ।
ಪ್ರೋತ್ಸಾಹಿಸಿ ಪೊರೆ ಶ್ರೀಕೃಷ್ಣ ॥ ೩೮ ॥

**ಜ**ನಾರ್ಧನನೆ ಯೆನ್ನಮನ ಸದಾನಿನ್ನೊಳು ।
ನೆಲೆಯಾಗಿ ನಿಲ್ಲಿಸೊ ಶ್ರೀರಾಮಾ ॥
**ಉ**ಪೇಂದ್ರನೇ ಕೃಪೆಯಿಂದಲಿ ಸರ್ವರ ।
ಬಂಧನ ಬಿಡಿಸೊ ಶ್ರೀಕೃಷ್ಣ ॥ ೩೯ ॥

**ಹ**ರಿ ನಿನ್ನನಾಮವ ನಿನ್ನಯ ಕರುಣದಿ ।
ಬರೆದೆನು ಹರುಷದಿ ಶ್ರೀರಾಮಾ ॥
**ಕೃಷ್ಣ**ಮೂರುತಿ ಮನದಿಷ್ಟವ ।
ಸಲಿಸುತ ಶಾಂತಿಯ ನೀಡೊ ಶ್ರೀಕೃಷ್ಣ ॥ ೪೦ ॥

ಶರಣರೊಳ್ಕರುಣದಿ ನಿನ್ನ ಸ್ಮರಿಸಿ ಮುಂ ।
ದರಿಯುವ ತೆರದಲಿ ಶ್ರೀರಾಮಾ ॥
ಪೊರೆಯೆಂದು ಬೇಡುವೆ ಕರುಣದಿ ।
ದೀನಳ ಮೊರೆಯನು ಲಾಲಿಸೊ ಶ್ರೀ ಕೃಷ್ಣ ॥ ೪೧ ॥

ನರಹರಿ ನಿನ್ನಯ ಚರಣವ ಬಹುಪರಿ ।
ವಿನಯದಿ ಬೇಡುವೆ ಶ್ರೀರಾಮಾ ॥

ವರಶ್ರೀನಿವಾಸನೆ ಕರುಣದೊಳೆಲ್ಲರ ।
ಪೊರೆಯೊ ದಯಾನಿಧಿ ಶ್ರೀಕೃಷ್ಣ ॥೪೨ ॥

ಮಂಗಳ ಶ್ರೀ ರಾಮ ಮೂರುತಿಗೇ ।
ಜಯ ಮಂಗಳ ನಿನ್ನಯ ಭಜಕರಿಗೇ ।
ಮಂಗಳ ನೀಡುತ ಪೊರೆವವಗೇ ।
ಶುಭಮಂಗಳ ಶ್ರೀಕೃಷ್ಣ ಮೂರುತಿಗೇ ।
ಮಂಗಳಂ ಜಯ ಮಂಗಳಂ ॥

# ಶ್ರೀ ವೆಂಕಟೇಶ ಕಲ್ಯಾಣ.

ಗುರುಗಳಿಗೊಂದಿಸಿ ಶ್ರೀಕೃಷ್ಣ ।
ಬಲು ವಿನಯದಿ ಬೇಡುವೆ ಹರಿಕೃಷ್ಣ ॥
ನಾಮದ ಮಾಲೆಯ ಶ್ರೀಕೃಷ್ಣ ।
ನೀ ಪ್ರೇಮದಿ ಬರೆಯಿಸೊ ಶ್ರೀಕೃಷ್ಣ ॥
ಕೃಷ್ಣ ಕೃಷ್ಣ ಹರಿ ಶ್ರೀಕೃಷ್ಣ ಹರಿಕೃಷ್ಣ ಕೃಷ್ಣ ರಾಧಾಕೃಷ್ಣ ॥

ವರವೈಕುಂಠದಿ ಶ್ರೀಕೃಷ್ಣ । ನೀ
ಸರಸದೊಳಿರುತಿರೆ ಹರಿಕೃಷ್ಣ ॥
ಭರದೊಳು ಭೃಗುಮುನಿ ಶ್ರೀಕೃಷ್ಣ । ಕ್ರೋ
ಧದಿ ಬಂದು ಒದೆಯಲು ಹರಿಕೃಷ್ಣ ॥ ೧ ॥

ಪರಮ ಪುರುಷನೆ ಶ್ರೀಕೃಷ್ಣ । ನೀ
ಚರಣದ ಅಕ್ಷಿಯ ಹರಿಕೃಷ್ಣ ॥

ತ್ವರದೊಳು ತೆಗೆಯುತ ಶ್ರೀಕೃಷ್ಣ । ಬಹು
ಪರಿಯೊಳು ಮನ್ನಿಸೆ ಹರಿಕೃಷ್ಣ ॥ ೨ ॥

ಪರಮ ಸಂತೋಷದಿ ಶ್ರೀಕೃಷ್ಣ । ಮುನಿ
ತೆರಳಿ ಪೋಗಲು ಹರಿಕೃಷ್ಣ ।
ಕ್ರೋಧವ ತಾಳುತ ಶ್ರೀಕೃಷ್ಣ ॥ ಲಕ್ಷ್ಮಿ
ಪೋದಳು ದುಗುಡದಿ ಹರಿಕೃಷ್ಣ ॥ ೩ ॥

ಚಿತ್ತದೊಲಬ್ಬೆಯ ಶ್ರೀಕೃಷ್ಣ । ನೀ
ಬಿಟ್ಟಿರ ಲಾರೆನೆಂದು ಹರಿಕೃಷ್ಣ ॥
ಉತ್ತಮ ವೈಕುಂಠ ಶ್ರೀಕೃಷ್ಣ । ನೀ
ಬಿಟ್ಟು ನೀ ತೆರಳಿದೆ ಹರಿಕೃಷ್ಣ ॥ ೪ ॥

ಹುತ್ತದಿ ನೆಲಸುತ ಶ್ರೀಕೃಷ್ಣ ॥ ನೀ
ಉತ್ತಮ ಹಾಲನು ಹರಿಕೃಷ್ಣ ।
ನಿತ್ಯದಿ ಸವಿಯುತ ಶ್ರೀಕೃಷ್ಣ । ನೀ
ಪೆಟ್ಟನು ಗೊಂಡೆಯೊ ಹರಿಕೃಷ್ಣ ॥ ೫ ॥

ರಕ್ತವ ಸುರಿಸುತ ಶ್ರೀಕೃಷ್ಣ । ನೀ
ನಿತ್ತೆಯೊ ಶಾಪವ ಹರಿಕೃಷ್ಣ ॥
ಅತ್ಯಾದರದಲಿ ಶ್ರೀಕೃಷ್ಣ । ಪ
ಶ್ಚಾತ್ತಾಪ ತೋರಿದೆ ಹರಿಕೃಷ್ಣ ॥ ೬ ॥

ಔಷಧಿ ಗೋಸುಗ ಶ್ರೀಕೃಷ್ಣ । ನೀ
ಪೋಗುತ ವರಹನೋಳ್ಹರಿಕೃಷ್ಣ ॥
ಧರಣಿಯ ಬೇಡುತ ಶ್ರೀಕೃಷ್ಣ । ನೀ
ಗಿರಿಯೊಳು ನೆಲೆಸಿದೆ ಹರಿಕೃಷ್ಣ ॥ ೭ ॥

ವನಕೆನೀ ಬೇಟೆಗೆ ಶ್ರೀಕೃಷ್ಣ । ನೀ
ಪೋಗುತ ವನಿತೆಯ ಹರಿಕೃಷ್ಣ ॥
ನೋಡುತ ಸರಸದಿ ಶ್ರೀಕೃಷ್ಣ । ಮಾ
ತಾಡಿಸಿದೆಯೊ ಶ್ರೀ ಹರಿಕೃಷ್ಣ ॥ ೮ ॥

ಮನದಲಿ ಮೋಹಿಸಿ ಶ್ರೀಕೃಷ್ಣ । ಕುಲ
ಗೋತ್ರವ ಕೇಳುತ ಹರಿಕೃಷ್ಣ ।
ಬೆಡಗು ಗಾರ್ತಿಯೂ ಶ್ರೀಕೃಷ್ಣ । ನಿನ್ನ
ಕುದುರೆಯ ಕೊಲ್ಲಲು ಹರಿಕೃಷ್ಣ ॥ ೯ ॥

ಜೆಡಗು ತೋರುತ ಶ್ರೀಕೃಷ್ಣ । ಬಹು
ದುಗುಡವ ತೋರುತ ಹರಿಕೃಷ್ಣ ।
ಕೊರವಿಯ ವೇಷವ ಶ್ರೀಕೃಷ್ಣ । ನಿ
ಧರಿಸಿದೆ ಹರುಷದಿ ಹರಿಕೃಷ್ಣ ॥ ೧೦ ॥

ವರವೆಂಕಟೇಶನೆ ಶ್ರೀಕೃಷ್ಣ । ನಿನ್ನ
ಚರಿತೆಯ ಪೊಗಳಲು ಹರಿಕೃಷ್ಣ ॥
ಹರುಷದಿ ಕೇಳುತ ಶ್ರೀಕೃಷ್ಣ ॥ ಕಣ್ಣ
ತೆರದಳು ವನಿತೆಯು ಹರಿಕೃಷ್ಣ ॥ ೧೧ ॥

ಅರಸಿಯು ಕೊರವಿಯ ಶ್ರೀಕೃಷ್ಣ । ಬಹು
ಪರಿಯೊಳು ಮನ್ನಿಸೆ ಹರಿಕೃಷ್ಣ ॥
ಪರಿಪರಿ ಭೋದಿಸಿ ಶ್ರೀಕೃಷ್ಣ । ನೀ
ತರುಣಿಯ ಒಲಿಸಿದೆ ಹರಿಕೃಷ್ಣ ॥ ೧೨ ॥

ಅರಸನಿ ಗಭಯವ ಶ್ರೀಕೃಷ್ಣ । ನೀ
ಕರುಣದಿ ನೀಡುತ ಹರಿಕೃಷ್ಣ ॥

ಮಡದಿಯ ಕೂಡುತ ಶ್ರೀಕೃಷ್ಣ । ನೀ
ಗಿರಿಯೊಳ ನೆಲಸಿದೆ ಹರಿಕೃಷ್ಣ ॥ ೧೩ ॥

ಸುರಗಿರಿ ಯೊಡೆಯನೆ ಶ್ರೀಕೃಷ್ಣ । ನಿನ್ನ
ಚರಣಕ್ಕೆ ಎರಗುವೆ ಹರಿಕೃಷ್ಣ ॥
ಕರುಣಿಸಿ ಪೊರೆಯೋ ಶ್ರೀಕೃಷ್ಣ । ಅಘ
ಹರನೀ ನೆಂಬೆನು ಹರಿಕೃಷ್ಣ ॥ ೧೪ ॥

## ಅಕಾರದಿಂದಾರಂಭಿಸಿ ಶ್ರೀಕೃಷ್ಣಲೀಲೆಯು

ಕೃಷ್ಣಕೃಷ್ಣಹರಿ ಶ್ರೀಕೃಷ್ಣ ಹರಿಕೃಷ್ಣಕೃಷ್ಣ ರಾಧಾಕೃಷ್ಣ
ಕೃಷ್ಣಕೃಷ್ಣ ಹರಿಶ್ರೀಕೃಷ್ಣ ಮನದಿಷ್ಟವಸಲಿಸೋ ಹರಿಕೃಷ್ಣ ॥ಪ॥

**ಅ**ಸುರನ ಸೆರೆಯೊಳು ಶ್ರೀಕೃಷ್ಣ । ಅರ್ಧ
ರಾತ್ರಿಯೊಳು ಜನಿಸಿದೆ ಹರಿಕೃಷ್ಣ ॥
**ಆ**ಶ್ರಿತ ರಕ್ಷಕ ಶ್ರೀಕೃಷ್ಣ । ಮಾತೆ
ಗೆವಿಶ್ವವ ತೋರಿದೆ ಹರಿಕೃಷ್ಣ ॥ ೧೫ ॥

**ಇ**ಂದಿರೆಯರಸನೆ ಶ್ರೀಕೃಷ್ಣ । ಮಾಯ
ಬಂಧನ ಬಿಡಿಸುವ ಹರಿಕೃಷ್ಣ ॥
**ಈ**ಕ್ಷಿಪ ಯಮುನೆಯ ಶ್ರೀಕೃಷ್ಣ । ನೀ
ದಾಟುತ ಬಂದೆಯೊ ಹರಿಕೃಷ್ಣ ॥ ೧೬ ॥

**ಉ**ದ್ಧವ ಸಖನೇ ಶ್ರೀಕೃಷ್ಣ । ಮುದ್ದು
ರುಕ್ಮಿಣಿ ಅರಸನೆ ಹರಿಕೃಷ್ಣ ॥
**ಊ**ರ್ವಿಯೊ ಳ್ಭಜಕರ ಶ್ರೀಕೃಷ್ಣ । ನೀ
ಪ್ರೇಮದಿ ಪೊರೆಯುವ ಹರಿಕೃಷ್ಣ ॥ ೧೭ ॥

ಋಷಿಗಳ ಹೃದಯದಿ ಶ್ರೀಕೃಷ್ಣ । ಬಹು
ಪರಿಯೊಳು ಶೋಭಿಪ ಹರಿಕೃಷ್ಣ ॥
ಎಷ್ಟೆಂದು ಪೊಗಳಲಿ ಶ್ರೀಕೃಷ್ಣ । ನಿನ್ನ
ಶ್ರೇಷ್ಠವು ಹಿರಿಮೆಯನು ಹರಿಕೃಷ್ಣ ॥ ೧೮ ॥

ಏನೆಂದು ಬಣ್ಣಿಪೆ ಶ್ರೀಕೃಷ್ಣ । ಯನ್ನ
ಹೀನಬುದ್ಧಿಯೊಳು ಹರಿಕೃಷ್ಣ ॥
ಐವರ ಸತಿಗೆ ಶ್ರೀಕೃಷ್ಣ । ನೀ
ಅಕ್ಷಯ ವಿತ್ತೆಯೊ ಹರಿಕೃಷ್ಣ ॥ ೧೯ ॥

ಒಂದೊಂದು ರೂಪದಿ ಶ್ರೀಕೃಷ್ಣ । ಬಹು
ಅಂದವ ತೋರುವ ಹರಿಕೃಷ್ಣ ॥
ಓಲಗದಲಿ ಧರ್ಮ ಶ್ರೀಕೃಷ್ಣ । ಅಗ್ರ
ಪೂಜೆಯ ಗೊಂಡೆಯೊ ಹರಿಕೃಷ್ಣ ॥ ೨೦ ॥

ಔರಸ ಪ್ರೇಮದಿ ಶ್ರೀಕೃಷ್ಣ । ಗೋಪಿ
ಬಳಿಯೊಳು ಬಳೆದೆಯೊ ಹರಿಕೃಷ್ಣ ॥
ಅಂಬುಧಿ ಶಯನನೆ ಶ್ರೀಕೃಷ್ಣ । ಅಹ
ಲ್ಯೆಯನೀ ಪೊರೆದೆಯೊ ಹರಿಕೃಷ್ಣ ॥ ೨೧ ॥

ಕಮಲ ಲೋಚನನೆ ಶ್ರೀಕೃಷ್ಣ । ನೀ
ಕಾಮಿತ ದಾಯಕ ಹರಿಕೃಷ್ಣ ॥
ಖಗಪತಿ ವಾಹನ ಶ್ರೀಕೃಷ್ಣ । ನೀ
ಅಗಣಿತ ಮಹಿಮನೆ ಹರಿಕೃಷ್ಣ ॥ ೨೨ ॥

ಗರ್ವವ ಮುರಿಯುತ ಶ್ರೀಕೃಷ್ಣ । ದುಷ್ಟ
ಅಸುರರ ಶೀಳಿದೆ ಹರಿಕೃಷ್ಣ ॥

**ಘ**ನಮ ಹಿಮನೆನೀ ಶ್ರೀಕೃಷ್ಣ । ನಿನ್ನ
ಮಹಿಮೆಯು ಪೊಗಳುವೆ ಹರಿಕೃಷ್ಣ ॥ ೨೩ ॥

**ಚಂ**ದಿರ ವದನನೆ ಶ್ರೀಕೃಷ್ಣ । ದಿವ್ಯ
ಸುಂದರ ಮೂರುತಿ ಹರಿಕೃಷ್ಣ ॥
**ಛ**ತ್ರಚಾ ಮರದೊಳು ಶ್ರೀಕೃಷ್ಣ । ಬಹು
ಅರ್ತಿಯೊ ಳ್ಮೆರೆಯುವ ಹರಿಕೃಷ್ಣ ॥ ೨೪ ॥

**ಜ**ಗದೋದ್ಧಾರನೆ ಶ್ರೀಕೃಷ್ಣ । ನೀ
ಜಾಹ್ನವಿ ಜನಕನೆ ಹರಿಕೃಷ್ಣ ॥
**ಝಂ**ಕಾರದಲೀ ಶ್ರೀಕೃಷ್ಣ । ದುಷ್ಟ
ಬಿಂಕವ ಮುರಿದೆಯೊ ಹರಿಕೃಷ್ಣ ॥ ೨೫ ॥

**ಟ**ಗರಿನ ತೆರದಲಿ ಶ್ರೀಕೃಷ್ಣ । ಬಹು
ಅಸುರರ ಕೊಂದೆಯೊ ಹರಿಕೃಷ್ಣ ॥
**ಠ**ಕ್ಕರ ಸೊಕ್ಕನು ಶ್ರೀಕೃಷ್ಣ । ಮುರಿ
ದುತ್ಸಹ ತೋರುವ ಹರಿಕೃಷ್ಣ ॥ ೨೬ ॥

**ಡ**ಮರು ನಾದದಿಂದ ಶ್ರೀಕೃಷ್ಣ । ಬಹು
ವಿನಯದಿ ಪೊಗಳುವ ಹರಿಕೃಷ್ಣ ॥
**ಢ**ಂಡಂ ನಾದದಿ ಶ್ರೀಕೃಷ್ಣ । ಕಾಳಿ
ಫಣಿಯೊಳು ನಲಿಯುವ ಹರಿಕೃಷ್ಣ ॥ ೨೭ ॥

**ತ**ಂಧೆಯಂ ದದೀ ಶ್ರೀಕೃಷ್ಣ । ನೀ
ಚಂದದಿ ಪೊರೆಯೊ ಹರಿಕೃಷ್ಣ ॥
**ಥ**ರಥರ ನಡುಗುತ ಶ್ರೀಕೃಷ್ಣ । ನಿನ್ನ
ಕರೆಯಲು ಪೊರೆದೆಯೊ ಹರಿಕೃಷ್ಣ ॥ ೨೮ ॥

**ದ**ನುಜ ಸಂಹಾರಕ ಶ್ರೀಕೃಷ್ಣ । ಹರಿ
ಮುನಿಜನ ವಂದಿತ ಹರಿಕೃಷ್ಣ ॥
**ಧ**ರಣಿಯ ಕ್ಯಾದೆಯೊ ಶ್ರೀಕೃಷ್ಣ । ಸ್ವಾಮಿ
ದುರುಳನ ಸೀಳಿದೆ ಹರಿಕೃಷ್ಣ ॥ ೨೯ ॥

**ನ**ಗಧರ ರೂಪನೆ ಶ್ರೀಕೃಷ್ಣ । ನೀ
ಅಘಹರ ನೆಂಬೆನು ಹರಿಕೃಷ್ಣ ॥
**ಪ**ಶುಗಳ ಕ್ಯಾದನೆ ಶ್ರೀಕೃಷ್ಣ । ದುಷ್ಟ
ಅಸುರೆಯ ಕೊಂದೆಯೊ ಹರಿಕೃಷ್ಣ ॥ ೩೦ ॥

**ಫ**ಣಿಶಾಯಿಯೆ ನೀ ಶ್ರೀಕೃಷ್ಣ । ಬಹು
ವಿನಯದಿ ಪ್ರಾರ್ಥಿಪೆ ಹರಿಕೃಷ್ಣ ॥
**ಬ**ಂಧನ ಬಿಡಿಸೊ ಶ್ರೀಕೃಷ್ಣ । ಮುನಿ
ವೃಂದಗಳರಸನೆ ಹರಿಕೃಷ್ಣ ॥ ೩೧ ॥

**ಭ**ವರೋಗಹರ ಶ್ರೀಕೃಷ್ಣ । ನೀ
ಗುರುಮಧ್ವಗೊಲಿದ ಹರಿಕೃಷ್ಣ ॥
**ಮ**ದನಜನಕನೇ ಶ್ರೀಕೃಷ್ಣ । ನಿನ್ನ
ಮುದದಲಿ ಭಜಿಸುವೆ ಹರಿಕೃಷ್ಣ ॥ ೩೨ ॥

**ಯ**ತಿಗಳು ಪೂಜಿಪ ಶ್ರೀಕೃಷ್ಣ । ಪರಿ
ಪತಿತ ಪಾವನನೆ ಹರಿಕೃಷ್ಣ ॥
**ರ**ತಿಪತಿ ಪಿತನೇ ಶ್ರೀಕೃಷ್ಣ । ಸನ್
ಮತಿಹೀನಳುನಾ ಹರಿಕೃಷ್ಣ ॥ ೩೩ ॥

**ಲ**ಕ್ಷ್ಮೀರಮಣನೆ ಶ್ರೀಕೃಷ್ಣ । ಹರಿ
ಮೋಕ್ಷದರಸನೇ ಹರಿಕೃಷ್ಣ ॥

**ವ**ಸುದೇವ ಸುತನೇ ಶ್ರೀಕೃಷ್ಣ । ನೀ
ನತಿಗುಣ ತೋರಿಸೊ ಹರಿಕೃಷ್ಣ ॥ ೩೪ ॥

**ಶ**ಶಿವದನನೆನೀ ಶ್ರೀಕೃಷ್ಣ । ನೀ
ಸತತವು ಪೊರೆಯೋ ಹರಿಕೃಷ್ಣ ॥
**ಷ**ಡ್ಗುಣ ಭರಿತನೆ ಶ್ರೀಕೃಷ್ಣ । ಸ್ವಾಮಿ
ಮಧ್ವಸು ಪೂಜಿತ ಹರಿಕೃಷ್ಣ ॥ ೩೫ ॥

**ಸ**ರಸದಿ ನಲಿಯುವ ಶ್ರೀಕೃಷ್ಣ । ಬಹು
ಪರಿಯೊಳು ಬೇಡುವೆ ಹರಿಕೃಷ್ಣ ॥
**ಹ**ರುಷದಿ ಸ್ತ್ರೀಯರ ಶ್ರೀಕೃಷ್ಣ । ಕೂಡಿ
ಜಲಕ್ರೀಡೆ ಯಾಡಿದೆ ಹರಿಕೃಷ್ಣ ॥ ೩೬ ॥

**ಅ**ಖಿಳ ಬ್ರಹ್ಮಾಂಡವ ಶ್ರೀಕೃಷ್ಣ । ನೀ
ಉದರದಿ ತೋರಿದೆ ಹರಿಕೃಷ್ಣ ॥
**ಕ್ಷ**ಮಿಸುತ ಶರಣರ ಶ್ರೀಕೃಷ್ಣ । ನೀ
ಕರುಣದಿ ಪೊರೆಯೊ ಹರಿಕೃಷ್ಣ ॥ ೩೭ ॥

**ಜ್ಞಾ**ನನಿಧಿಯೆ ನೀ ಶ್ರೀಕೃಷ್ಣ ॥ ಸು
ಜ್ಞಾನಿಗಳರಸನೆ ಹರಿಕೃಷ್ಣ ॥
ದೀನಳ ಪೊರೆಯೋ ಶ್ರೀಕೃಷ್ಣ । ಪವ
ಮಾನ ವಂದಿತನೆ ಹರಿಕೃಷ್ಣ ॥ ೩೮ ॥

ವಿನಯದಿ ಬೇಡುವೆ ಶ್ರೀಕೃಷ್ಣ । ನಿನ್ನ
ಚರಣವ ನೀಡೊ ಹರಿಕೃಷ್ಣ ॥
ಕೃಷ್ಣಕೃಷ್ಣ ಹರಿ ಶ್ರೀಕೃಷ್ಣ । ಹರಿ
ಕೃಷ್ಣಕೃಷ್ಣ ರಾಧಾ ಕೃಷ್ಣ ॥ ೩೯ ॥

# ದಶಾವತಾರ ಸ್ತುತಿ.

ಅಗಣಿತ ಮಹಿಮನೆ ಶ್ರೀಕೃಷ್ಣ । ನೀ
ನಿಗಮವ ತಂದೆಯೊ ಹರಿಕೃಷ್ಣ ॥
ಜಲದೊಳು ಮುಳುಗಲು ಶ್ರೀಕೃಷ್ಣ । ಮತ್ಸ್ಯ
ರೂಪವ ಧರಿಸಿದೆ ಹರಿಕೃಷ್ಣ ॥ ೪೦ ॥

ಸುರರಸುರರು ಕೂಡಿ ಶ್ರೀಕೃಷ್ಣ । ದೊಡ್ಡ
ಶರಧಿಯ ಮಥಿಸಲು ಹರಿಕೃಷ್ಣ ॥
ಗಿರಿಯನು ಎತ್ತಲು ಶ್ರೀಕೃಷ್ಣ । ಕೂರ್ಮ
ರೂಪವ ಧರಿಸಿದೆ ಹರಿಕೃಷ್ಣ ॥ ೪೧ ॥

ದುರುಳ ಹಿರಣ್ಯಕನ ಶ್ರೀಕೃಷ್ಣ । ನೀ
ಭರದಲಿ ಕೊಂದೂ ಹರಿಕೃಷ್ಣ ॥
ಧರಣಿಯ ತಂದೆಯೊ ಶ್ರೀಕೃಷ್ಣ । ನೀ
ವರಹವ ತಾರನೆ ಹರಿಕೃಷ್ಣ ॥ ೪೨ ॥

ತರಳನ ಪೊರೆಯಲು ಶ್ರೀಕೃಷ್ಣ । ಬಹು
ಕ್ರೋಧವ ತಾಳುತ ಹರಿಕೃಷ್ಣ ॥
ಕರುಳನು ಬಗಿದೆಯೊ ಶ್ರೀಕೃಷ್ಣ । ನೀ
ನರಹರಿ ರೂಪದಿ ಹರಿಕೃಷ್ಣ ॥ ೪೩ ॥

ಭೂಮಿಯ ಬೇಡುತ ಶ್ರೀಕೃಷ್ಣ । ಬಲಿ
ಬಾಗಿಲ ಕ್ಕಾದೆಯೊ ಹರಿಕೃಷ್ಣ ॥
ಕಾಮಿತ ವಿತ್ತೆಯೊ ಶ್ರೀಕೃಷ್ಣ । ಚಲ್ವ
ವಾಮನ ಮೂರುತಿ ಹರಿಕೃಷ್ಣ ॥ ೪೪ ॥

ಕೊಡಲಿಯ ಪಿಡಿದೂ ಶ್ರೀಕೃಷ್ಣ । ಕ್ಷತ್ರ
ಕುಲವ ಸಂಹರಿಸಿದೆ ಹರಿಕೃಷ್ಣ ॥
ಕಡುರೋಷ ತಾಳಿದೆ ಶ್ರೀಕೃಷ್ಣ । ನೀ
ಒಡೆಯ ಭಾರ್ಗವನೆ ಹರಿಕೃಷ್ಣ ॥ ೪೫ ॥

ಕೋತಿಗಳೊಡಗೂಡಿ ಶ್ರೀಕೃಷ್ಣ । ನೀ
ಸೇತುವ ರಚಿಸಿದೆ ಹರಿಕೃಷ್ಣ ॥
ಸೀತೆಯ ತಂದೆಯೊ ಶ್ರೀಕೃಷ್ಣ । ಶ್ರೀ
ರಾಮಮೂರುತಿಯೆ ಹರಿಕೃಷ್ಣ ॥ ೪೬ ॥

ಜಲಜಲೋಚನನೆ ಶ್ರೀಕೃಷ್ಣ । ಸ್ವಾಮಿ
ಜಲರುಹನಾಭನೆ ಹರಿಕೃಷ್ಣ ॥
ಕಡಗೋಲು ಪಿಡಿಯುತ ಶ್ರೀಕೃಷ್ಣ । ನೀ
ಬೆಡಗನು ತೋರುವೆ ಹರಿಕೃಷ್ಣ ॥ ೪೭ ॥

ಅತಿಹರುಷದಿಪೋಗಿ ಶ್ರೀಕೃಷ್ಣ । ನೀ
ತ್ರಿಪುರರ ಸತಿಯರ ಹರಿಕೃಷ್ಣ ॥
ವ್ರತವನು ಕೆಡಿಸಿದೆ ಶ್ರೀಕೃಷ್ಣ । ಸ್ವಾಮಿ
ಬೌದ್ಧವತಾರನೆ ಹರಿಕೃಷ್ಣ ॥ ೪೮ ॥

ತುರಗವ ನೇರುತ ಶ್ರೀಕೃಷ್ಣ । ಬಹು
ಸರಸದಿ ತಿರುಗುವ ಹರಿಕೃಷ್ಣ ॥
ಕರುಣಾಸಾಗರ ಶ್ರೀಕೃಷ್ಣ । ಕಲ್ಕಿ
ರೂಪದಿ ಮೆರೆಯುವ ಹರಿಕೃಷ್ಣ ॥ ೪೯ ॥

ಜಲಕ್ರೀಡೆ ಯಾಡಿದೆ ಶ್ರೀಕೃಷ್ಣ । ನೀ
ನಳಿನಾಕ್ಷಿಯರ ಕೂಡಿ ಹರಿಕೃಷ್ಣ ॥

ಜಲಜನಾಭನೆ ಶ್ರೀಕೃಷ್ಣ । ನೀ
ಜಲದೊಳು ಮುಳುಗಿದೆ ಹರಿಕೃಷ್ಣ ॥ ೫೦ ॥

ನಿರ್ಮಲ ಮೂರುತಿ ಶ್ರೀಕೃಷ್ಣ । ನಿ
ರ್ನಾಮವ ಗೈಯುವೆ! ಹರಿಕೃಷ್ಣ ॥
ಧರ್ಮಸ್ವರೂಪನೆ ಶ್ರೀಕೃಷ್ಣ । ಸ್ವಾಮಿ
ಕೂರ್ಮಮೂರುತಿಯೆ ಹರಿಕೃಷ್ಣ ॥ ೫೧ ॥

ದೈತ್ಯನ ಸೀಳುತ ಶ್ರೀಕೃಷ್ಣ ॥ ನೀ
ಅತ್ಯಾದರದಲಿ ಹರಿಕೃಷ್ಣ ॥
ಎತ್ತಿತಂದೆಯೊ ಶ್ರೀಕೃಷ್ಣ । ಭೂಮಿ
ಚಿತ್ತವ ವಲ್ಲಭನೆ ಹರಿಕೃಷ್ಣ ॥ ೫೨ ॥

ಬೆದರಿಪ ದುರುಳನ ಶ್ರೀಕೃಷ್ಣ । ನೀ
ಕರುಳನು ಬಗಿಯುತ ಹರಿಕೃಷ್ಣ ॥
ತರಳನ ಕ್ಯಾದೆಯೊ ಶ್ರೀಕೃಷ್ಣ । ಹರಿ
ನರಮೃಗ ರೂಪದಿ ಹರಿಕೃಷ್ಣ ॥ ೫೩ ॥

ವಾಮನ ಮೂರುತಿ ಶ್ರೀಕೃಷ್ಣ । ನೀ
ಪ್ರೇಮದಿ ಬಲಿಯೊಳು ಹರಿಕೃಷ್ಣ ॥
ದಾನವ ಬೇಡುತ ಶ್ರೀಕೃಷ್ಣ । ನೀ
ಕರುಣದಿ ಪೊರೆದೆಯೊ ಹರಿಕೃಷ್ಣ ॥ ೫೪ ॥

ಪಿತವರ ಪಾಲಿಸೆ ಶ್ರೀಕೃಷ್ಣ । ನೀ
ನತಿರೋಷ ತಾಳುತ ಹರಿಕೃಷ್ಣ ॥
ಮಾತೆಯ ಕೊಂದೆಯೊ ಶ್ರೀಕೃಷ್ಣ । ಹರಿ
ಮಾತುಲ ಮರ್ದನ ಹರಿಕೃಷ್ಣ ॥ ೫೫ ॥

ಪಾವನ ಮೂರುತಿ ಶ್ರೀಕೃಷ್ಣ । ನೀ
ವಾನರರನು ಕೂಡಿ ಹರಿಕೃಷ್ಣ ॥
ದಾನವರನು ಕೊಂದೆ ಶ್ರೀಕೃಷ್ಣ । ಸ್ವಾಮಿ
ಜಾನಕಿಯನುತಂದೆ ಹರಿಕೃಷ್ಣ ॥ ೫೬ ॥

ಪೊಡವಿಯೊಳುಡುಪಿಯು ಶ್ರೀಕೃಷ್ಣ । ನೀ
ಕಡುಶ್ರೇಷ್ಠವೆನುತಲೆ ಹರಿಕೃಷ್ಣ ॥
ಪಡಗರದಲಿಬಂದೆ ಶ್ರೀಕೃಷ್ಣ । ಹರಿ
ಕೃಷ್ಣಮೂರುತಿಯೆ ಹರಿಕೃಷ್ಣ ॥ ೫೭ ॥

ವಸನವ ತ್ಯಜಿಸುತ ಶ್ರೀಕೃಷ್ಣ । ನೀ
ಕುಶಲದಿ ಪೋಗುತ ಹರಿಕೃಷ್ಣ ॥
ವ್ರತವನು ಕೆಡಿಸುತ ಶ್ರೀಕೃಷ್ಣ । ನೀ
ಸತಿಯರ ಪೊರೆದೆಯೊ ಹರಿಕೃಷ್ಣ ॥ ೫೮ ॥

ರಾವುತನಾಗುತ ಶ್ರೀಕೃಷ್ಣ । ನೀ
ಏರುತ ಕುದುರೆಯ ಹರಿಕೃಷ್ಣ ॥
ಮೀರಿದ ದುಷ್ಟರ ಶ್ರೀ ಕೃಷ್ಣ ।
ಸಂಹಾರವ ಮಾಡಿದೆ ಹರಿಕೃಷ್ಣ ॥ ೫೯ ॥

## ಶ್ರೀಕೃಷ್ಣನ ಬಾಲಲೀಲೆ ಮತ್ತು ಇತರ ಲೀಲಾ ವಿನೋದಗಳು.

ವಿಷವನು ಹೀರುತ ಶ್ರೀ ಕೃಷ್ಣ । ದುಷ್ಟ
ಅಸುರೆಯು ಕೊಂದೆಯೊ ಹರಿಕೃಷ್ಣ ॥
ಕುಶಲವ ತೋರಿದೆ ಶ್ರೀಕೃಷ್ಣ । ಸ್ವಾಮಿ
ವಸುದೇವ ಕಂದನೆ ಹರಿಕೃಷ್ಣ ॥ ೬೦ ॥

ಬಂಡಿಯ ಮುರಿಯುತ ಶ್ರೀಕೃಷ್ಣ । ಉ
ದ್ದಂಡನ ಕೊಂದೆಯೊ ಹರಿಕೃಷ್ಣ ॥
ಚಂದ್ರನ ಬೇಡಿದ ಶ್ರೀಕೃಷ್ಣ । ನೀ
ಪುಂಡರೀಕಾಕ್ಷನೆ ಹರಿಕೃಷ್ಣ ॥ ೬೧ ॥

ಒರಳನು ಎಳೆದೂ ಶ್ರೀಕೃಷ್ಣ । ಮತ್ತಿ
ಮರವನು ಮುರಿದೆಯೊ ಹರಿಕೃಷ್ಣ ॥
ಸುರರೊಡೆಯನೆ ನೀ ಶ್ರೀಕೃಷ್ಣ । ನಿನ್ನ
ಪರಿಪರಿ ಸ್ತುತಿಸುವೆ ಹರಿಕೃಷ್ಣ ॥ ೬೨ ॥

ಶಿಶುಲೀಲೆಯೊಳು ಶ್ರೀಕೃಷ್ಣ । ಬಹು
ಅಸುರರ ಕೊಲ್ಲುತ ಹರಿಕೃಷ್ಣ ॥
ಶಶಿಮುಖಿ ಗೋಪಿಗೆ ಶ್ರೀಕೃಷ್ಣ । ಬಲು
ಹರುಷವ ತೋರಿದೆ ಹರಿಕೃಷ್ಣ ॥ ೬೩ ॥

ಗೋಕುಲದಲಿ ನೀ ಶ್ರೀಕೃಷ್ಣ । ನೀ
ಗೋವಳರೊಡಗೂಡಿ ಹರಿಕೃಷ್ಣ ॥
ಗೋವ್ಗಳ ಕ್ವಾಡೆಯೋ ಶ್ರೀಕೃಷ್ಣ । ನೀ
ಗೋಪಾಲ ಕೃಷ್ಣನೆ ಹರಿಕೃಷ್ಣ ॥ ೬೪ ॥

ಕಿಚ್ಚನು ನುಂಗಿದೆ ಶ್ರೀಕೃಷ್ಣ । ನೀ
ಸಚ್ಚಿದಾನಂದನೆ ಹರಿಕೃಷ್ಣ ॥
ಅಚ್ಚುತಾನಂತನೆ ಶ್ರೀಕೃಷ್ಣ । ಭಕ್ತ
ರಿಚ್ಛೆಯಸಲಿಸೊ ಹರಿಕೃಷ್ಣ ॥ ೬೫ ॥

ಗೋವರ್ಧನವನು ಶ್ರೀಕೃಷ್ಣ । ಕಿರಿ
ಬೆರಳೊಳಗೆತ್ತಿದೆ ಹರಿಕೃಷ್ಣ ॥

ಗೋಕುಲನಾಥನೆ ಶ್ರೀಕೃಷ್ಣ ॥ ಸ್ವಾಮಿ
ಗೋಪಿಯಕಂದನೆ ಹರಿಕೃಷ್ಣ ॥ ೬೬ ॥

ಕಾಳಿಯ ಮಡುವಿಗೆ ಶ್ರೀಕೃಷ್ಣ । ಹಾರಿ
ಕಾಳಿಯ ಫಣಿಯೊಳು ಹರಿಕೃಷ್ಣ ॥
ಲೀಲೆಯೊಳ್ನಲಿದೆಯೊ ಶ್ರೀಕೃಷ್ಣ । ಗೋ
ಪಾಲಕೃಷ್ಣನೇ ಹರಿಕೃಷ್ಣ ॥ ೬೭ ॥

ಮುರಲಿಯ ಪಿಡಿದಿಹ ಶ್ರೀಕೃಷ್ಣ । ನೀ
ಮುರಲಿಯ ನೂದುವ ಹರಿಕೃಷ್ಣ ॥
ಮುರಲಿಯ ನಾದದೊಳು ಶ್ರೀಕೃಷ್ಣ ।
ಮರುಳು ಗೊಳಿಸಿದೆಯೊ ಹರಿಕೃಷ್ಣ ॥ ೬೮ ॥

ಗೊಲ್ಲರ ಕೂಡುತ ಶ್ರೀಕೃಷ್ಣ । ಬಹು
ಮಲ್ಲರ ಕೊಂದೆಯೊ ಹರಿಕೃಷ್ಣ ॥
ಪುಲ್ಲನಾಭನೇ ಶ್ರೀಕೃಷ್ಣ । ನೀ
ಚಲ್ವಮೂರುತಿಯೆ ಹರಿಕೃಷ್ಣ ॥ ೬೯ ॥

ಬಾಲೆಯರೊಡಗೂಡಿ ಶ್ರೀಕೃಷ್ಣ । ಬಹು
ಲೀಲೆಯೊಳಾಡುವ ಹರಿಕೃಷ್ಣ ॥
ಲೋಲಲೋಚನನೆ ಶ್ರೀಕೃಷ್ಣ । ಜಲ
ಕೇಳಿಯೊಳ್ನಲಿಯುವ ಹರಿಕೃಷ್ಣ ॥ ೭೦ ॥

ಉಡುವ ಸೀರೆಯನು ಶ್ರೀಕೃಷ್ಣ । ಕದ್ದು
ಕಡಪದ ಮರದೊಳು ಹರಿಕೃಷ್ಣ ॥
ಬೆಡಗನು ತೋರುತ ಶ್ರೀಕೃಷ್ಣ । ನೀ
ಮಡದಿಯರ್ಗೊಲಿದೆಯೊ ಹರಿಕೃಷ್ಣ ॥ ೭೧ ॥

ಧರ್ಮಜ ವಂದಿತ ಶ್ರೀಕೃಷ್ಣ । ನೀ
ಧರ್ಮಸ್ವರೂಪನು ಹರಿಕೃಷ್ಣ ॥
ಧರ್ಮವ ಭೋಧಿಸಿ ಶ್ರೀಕೃಷ್ಣ । ಮನ
ನಿರ್ಮಲಗೊಳಿಸ್ದೆ ಹರಿಕೃಷ್ಣ ॥ ೭೨ ॥

## ಸುದಾಮ ಚರಿತ.

ಸಾಧುಸುದಾಮನು ಶ್ರೀಕೃಷ್ಣ । ನಿನ್ನ
ಪಾದವ ಸ್ಮರಿಸುತ ಹರಿಕೃಷ್ಣ ॥
ಮೋದದಿ ತೆರಳಲು ಶ್ರೀಕೃಷ್ಣ । ಸತಿ
ಆದರದಿಂದಲೆ ಹರಿಕೃಷ್ಣ ॥ ೭೩ ॥

ಮುಷ್ಟಿಪ್ರಥುಕವನು ಶ್ರೀಕೃಷ್ಣ । ಚಿಂದಿ
ವಸ್ತ್ರದಿ ಕಟ್ಟುತ ಹರಿಕೃಷ್ಣ ॥
ಕೃಷ್ಣನಿಗೀಯುತ ಶ್ರೀಕೃಷ್ಣ । ನಮ್ಮ
ಕಷ್ಟಪೇಳೆಂದಳು ಹರಿಕೃಷ್ಣ ॥ ೭೪ ॥

ಹೊರಟನು ಹರುಷದಿ ಶ್ರೀಕೃಷ್ಣ । ಶ್ರೀ
ಹರಿಯನು ಕಾಣಲು ಹರಿಕೃಷ್ಣ ।
ಪರಮ ಪಾವನ ಶ್ರೀಕೃಷ್ಣ । ದ್ವಾ
ರಕಿಯನು ಕಂಡನು ಹರಿಕೃಷ್ಣ ॥ ೭೫ ॥

ಆನಂದ ಮೂರುತಿ ಶ್ರೀಕೃಷ್ಣ । ನಿನ
ಗೊಂದಿಸಿ ಹರುಷದಿ ಹರಿಕೃಷ್ಣ ॥

ಆನಂದ ಬಾಷ್ಪದಿ ಶ್ರೀಕೃಷ್ಣ । ನಿನ್ನ
ಚರಣವ ತೊಳೆದನು ಹರಿಕೃಷ್ಣ ॥ ೭೬ ॥

ಮಿತ್ರಕುಚೇಲನ ಶ್ರೀಕೃಷ್ಣ । ನೀ
ನೆತ್ತುತ ಹರುಷದಿ ಹರಿಕೃಷ್ಣ ॥
ಹತ್ತಿರ ಕುಳಿತೂ ಶ್ರೀಕೃಷ್ಣ ॥ ಕ್ಷೇಮ
ವಾರ್ತೆಯ ಕೇಳಿದೆ ಹರಿಕೃಷ್ಣ ॥ ೭೭ ॥

ಮಿತ್ರಸತ್ಕಾರವ ಶ್ರೀಕೃಷ್ಣ । ನೀ
ಅರ್ತಿಯೊಳ್ನಡೆಸುತ ಹರಿಕೃಷ್ಣ ॥
ಭಕ್ತಿಯೊಳತ್ತಿಗೆ ಶ್ರೀಕೃಷ್ಣ । ಇತ್ತ
ವಸ್ತುಕೊಡೆಂದನು ಹರಿಕೃಷ್ಣ ॥ ೭೮ ॥

ಚಿನ್ನದ ತಟ್ಟೆಯ ಶ್ರೀಕೃಷ್ಣ । ಬಹು
ಮಾನ್ಯನು ತರಿಸುತ ಹರಿಕೃಷ್ಣ ॥
ಉನ್ನತ ವಸ್ತುವ ಶ್ರೀಕೃಷ್ಣ । ಇದ
ರೊಳಗಿರಿಸೆಂದನು ಹರಿಕೃಷ್ಣ ॥ ೭೯ ॥

ಭಕ್ತಸುದಾಮನು ಶ್ರೀಕೃಷ್ಣ । ದೀನ
ವೃತ್ತಿಗೆ ಬಳಲುತ ಹರಿಕೃಷ್ಣ ॥
ಮುಷ್ಟಿ ಪ್ರಥುಕವನು ಶ್ರೀಕೃಷ್ಣ । ತಟ್ಟೆ
ಯೊಳಿಟ್ಟು ಮಣಿದನು ಹರಿಕೃಷ್ಣ ॥ ೮೦ ॥

ಕೊಟ್ಟಪ್ರಥುಕವನು ಶ್ರೀಕೃಷ್ಣ । ವಂದು
ಮುಷ್ಟಿಬಾಯೊಳಗಿಡೆ ಹರಿಕೃಷ್ಣ ॥
ತಟ್ಟನೆ ಲಕ್ಷ್ಮಿಯು ಶ್ರೀಕೃಷ್ಣ । ಬಂದು
ಕೃಷ್ಣನ ಪಿಡಿದಳು ಹರಿಕೃಷ್ಣ ॥ ೮೧ ॥

ಭಕ್ತವತ್ಸಲನೆ ಶ್ರೀಕೃಷ್ಣ । ನಿನ್ನ
ಭಕ್ತನು ತಂದಿಹ ಹರಿಕೃಷ್ಣ ॥
ವಸ್ತ್ರ ಎಲ್ಲರಿಗು ಶ್ರೀಕೃಷ್ಣ । ನೀ
ನಿತ್ತ್ರ ಹರುಷತೋರೊ ಹರಿಕೃಷ್ಣ ॥ ೮೨ ॥

ಇಂದುವದನನೂ ಶ್ರೀಕೃಷ್ಣ । ಬಹು
ಮಂದಿ ಮಾರ್ಬಲಕೆ ಹರಿಕೃಷ್ಣ ॥
ಚಂದದಿ ನೀಡುತ ಶ್ರೀಕೃಷ್ಣ । ಜೊತೆ
ಯಿಂದಿರಿಸೆಂದನು ಹರಿಕೃಷ್ಣ ॥ ೮೩ ॥

ಭಕ್ತನ ಪ್ರಥುಕವ ಶ್ರೀಕೃಷ್ಣ । ದೊಡ್ಡ
ಬಿಟ್ಟವ ಮಾಡುತ ಹರಿಕೃಷ್ಣ ॥
ಅರ್ತಿಯೊಳ್ಸೊರೆದೆಯೊ ಶ್ರೀಕೃಷ್ಣ । ಪರಿ
ಭಕ್ತವತ್ಸಲನೇ ಹರಿಕೃಷ್ಣ ॥ ೮೪ ॥

ದಾಮಾಜಿ ಪಂತನ ಶ್ರೀಕೃಷ್ಣ । ನೀ
ಪ್ರೇಮದಿ ಪೊರೆಯಲು ಹರಿಕೃಷ್ಣ ॥
ಸೋಜಿಗ ತೋರಿದೆ ಶ್ರೀಕೃಷ್ಣ । ನೀ
ಮಾದಿಗ ವೇಷದಿ ಹರಿಕೃಷ್ಣ ॥ ೮೫ ॥

ಮಕರಿಯ ಬಾಧೆಗೆ ಶ್ರೀಕೃಷ್ಣ । ನಿನ್ನೊ
ಳರ್ಸಿರಾಜ ಮೊರೆಇಡೆ ಹರಿಕೃಷ್ಣ ॥
ತ್ವರದೊಳು ಬಂದೂ ಶ್ರೀಕೃಷ್ಣ । ನೀ
ಮಕರಿಯ ಸೀಳಿದೆ ಹರಿಕೃಷ್ಣ ॥ ೮೬ ॥

ಸತ್ಯಭಾಮೆಯಪ್ರಿಯ ಶ್ರೀಕೃಷ್ಣ । ನೀ
ಸವ್ಯಸಾಚಿಯಸಖ ಹರಿಕೃಷ್ಣ ॥

ದಿವ್ಯಾಂಬರಧರ ಶ್ರೀಕೃಷ್ಣ । ನೀ
ಭವ್ಯಸ್ವರೂಪನೆ ಹರಿಕೃಷ್ಣ ॥ ೮೭ ॥

ಭಕ್ತಿಗೆ ವಲಿದೂ ಶ್ರೀಕೃಷ್ಣ । ಸಖ
ರೂಪವ ಧರಿಸಿದೆ ಹರಿಕೃಷ್ಣ ॥
ಪತಿಸೇವೆ ಗೈದೂ ಶ್ರೀಕೃಷ್ಣ । ಅ
ದ್ಭುತವನು ತೋರಿದೆ ಹರಿಕೃಷ್ಣ ॥ ೮೮ ॥

ಚಿಣ್ಣಿಕೋಲುಚೆಂಡು ಶ್ರೀಕೃಷ್ಣ । ನೀ
ಚಿಣ್ಣರೊಳಾಡುವ ಹರಿಕೃಷ್ಣ ॥
ಬೆಣ್ಣೆಯ ಮೆದ್ದೂ ಶ್ರೀಕೃಷ್ಣ । ಕ
ನ್ನೆಯರನು ವಲಿಸಿದೆ ಹರಿಕೃಷ್ಣ ॥ ೮೯ ॥

ಹಾಲನು ಕುಡಿಯುತ ಶ್ರೀಕೃಷ್ಣ । ನೀ
ಬಾಲೆಯ ರೊಡಗೂಡಿ ಹರಿಕೃಷ್ಣ ॥
ನೀಲಮೇಘಶ್ಯಾಮ ಶ್ರೀಕೃಷ್ಣ । ಬಹು
ಲೀಲೆಯ ತೋರಿದೆ ಹರಿಕೃಷ್ಣ ॥ ೯೦ ॥

ವೃಂದೆಯ ಧರ್ಮವ ಶ್ರೀಕೃಷ್ಣ । ಮು
ಕುಂದನೆ ಕೆಡಿಸುತ ಹರಿಕೃಷ್ಣ ॥
ಚಂದದಿ ಕೊಲಿಸಿದೆ ಶ್ರೀಕೃಷ್ಣ । ಜ
ಲಂದರನನು ಶ್ರೀ ಹರಿಕೃಷ್ಣ ॥ ೯೧ ॥

ನೊಂದೂ ಬಳಲುತ ಶ್ರೀಕೃಷ್ಣ । ನಿನ
ಗೊಂದಿಸಿ ಮೊರೆಇಡೆ ಹರಿಕೃಷ್ಣ ॥
ಚಂದದಿ ಅಭಯವ ಶ್ರೀಕೃಷ್ಣ । ಗೋ
ವಿಂದನೀ ನಿತ್ತೆಯೊ ಹರಿಕೃಷ್ಣ ॥ ೯೨ ॥

ಜಲಧಿ ಶಯನನೆ ಶ್ರೀಕೃಷ್ಣ । ನೀ
ಜಲನಿಧಿಗೊಡೆಯನೆ ಹರಿಕೃಷ್ಣ ॥
ಜಲಜ ಮಿತ್ರನೆ ಶ್ರೀಕೃಷ್ಣ । ನೀ
ಜಲಜಲೋಚನನೆ ಹರಿಕೃಷ್ಣ ॥ ೯೩ ॥

ಸುರವರ ಕರನೇ ಶ್ರೀಕೃಷ್ಣ । ಸಂ
ಹರಿಸುತ ಕುಂಡಲ ಹರಿಕೃಷ್ಣ ॥
ಭರದಲಿ ತಂದೂ ಶ್ರೀಕೃಷ್ಣ । ನೀ
ಅದಿತಿಗೆ ಇತ್ತೆಯೊ ಹರಿಕೃಷ್ಣ ॥ ೯೪ ॥

ಸರಸದಿ ಸತಿಯಳ ಶ್ರೀಕೃಷ್ಣ । ಕೂಡಿ
ಸುರನಗರಿಗೆ ಶ್ರೀ ಹರಿಕೃಷ್ಣ ॥
ಹರುಷದಿ ಪೋದೆಯೊ ಶ್ರೀಕೃಷ್ಣ । ನೀ
ಕರುಣಾಕರನೇ ಹರಿಕೃಷ್ಣ ॥ ೯೫ ॥

ಸುರಪಾರಿಜಾತವ ಶ್ರೀಕೃಷ್ಣ । ನೀ
ಭರದೊಳುಭೂಮಿಗೆ ಹರಿಕೃಷ್ಣ ॥
ತರಲು ಭಾಮೆಯೊಳ್ ಶ್ರೀಕೃಷ್ಣ । ನೀ
ತೆಗೆಸಿದೆ ಹರುಷದಿ ಹರಿಕೃಷ್ಣ ॥ ೯೬ ॥

ಅಮರರು ರೋಷದಿ ಶ್ರೀಕೃಷ್ಣ । ನೀ
ಬರಲದ ಕಾಣುತ ಹರಿಕೃಷ್ಣ ॥
ಭಾಮೆಯೊಕ್ಕದನವ ಶ್ರೀಕೃಷ್ಣ । ನೀ
ಪ್ರೇಮದಿ ಗೈಸಿದೆ ಹರಿಕೃಷ್ಣ ॥ ೯೭ ॥

ಚಂದದಿ ಕದನವ ಶ್ರೀಕೃಷ್ಣ । ಗೋ
ವಿಂದನೆ ಗೈಸುತ ಹರಿಕೃಷ್ಣ ॥

ಇಂದ್ರನ ಗರ್ವರ ಶ್ರೀಕೃಷ್ಣ । ನೀ
ಭಂಗವ ಮಾಡಿದೆ ಹರಿಕೃಷ್ಣ ॥ ೯೮ ॥

ಸುರಪನು ವಿನಯದಿ ಶ್ರೀಕೃಷ್ಣ । ನಿನ್ನ
ಚರಣಕೆ ಎರಗುತ ಹರಿಕೃಷ್ಣ ।
ಭರದೊಳು ಬೇಡಲು ಶ್ರೀಕೃಷ್ಣ । ನೀ
ಕರುಣವ ತೋರಿದೆ ಹರಿಕೃಷ್ಣ ॥ ೯೯ ॥

ಸರಸದಿ ಭಾಮೆಯ ಶ್ರೀಕೃಷ್ಣ । ಕೂಡಿ
ಸುರಪಗೆ ಅಭಯವ ಹರಿಕೃಷ್ಣ ॥
ಹರುಷದಿ ನೀಡಿದೆ ಶ್ರೀಕೃಷ್ಣ । ನಿನ್ನ
ಚರಣಕೆ ಮಣಿವೆನು ಹರಿಕೃಷ್ಣ ॥ ೧೦೦ ॥

ಮಿಥ್ಯಪವಾದವ ಶ್ರೀಕೃಷ್ಣ । ನೀ
ಅರ್ತಿಯೊಳ್ಕಲ್ಪಿಸಿ ಹರಿಕೃಷ್ಣ ॥
ಭಕ್ತನ ಪೊರೆಯಲು ಶ್ರೀಕೃಷ್ಣ । ನೀ
ಚಿತ್ತೈಸಿದೆಯೋ ಹರಿಕೃಷ್ಣ ॥ ೧೦೧ ॥

ಅಂಬುಜನಾಭನೆ ಶ್ರೀಕೃಷ್ಣ । ನೀ
ಜಾಂಬವನೊಳು ಶ್ರೀ ಹರಿಕೃಷ್ಣ ॥
ಚಂದದಿ ಕದನವ ಶ್ರೀಕೃಷ್ಣ । ಗೈದೆ
ಸುಂದರ ಮೂರುತಿ ಹರಿಕೃಷ್ಣ ॥ ೧೦೨ ॥

ಕದನದಿ ಸೋಲುತ ಶ್ರೀಕೃಷ್ಣ । ರಾಮ
ಪದವನು ನೆನೆಯಲು ಹರಿಕೃಷ್ಣ ॥
ಮೋದವ ತೋರುತ ಶ್ರೀಕೃಷ್ಣ । ರಾಮ
ರೂಪವ ತೋರಿದೆ ಹರಿಕೃಷ್ಣ ॥ ೧೦೩ ॥

ವಂದಿಸಿ ಬೇಡುತ ಶ್ರೀಕೃಷ್ಣ । ಜಾತೆ
ಜಾಂಬವತಿಯನೂ ಹರಿಕೃಷ್ಣ ॥
ಚಂದದೊಳಿತ್ತನು ಶ್ರೀಕೃಷ್ಣ । ಮಣಿ
ಯಿಂದೊಡಗೂಡುತ ಹರಿಕೃಷ್ಣ ॥ ೧೦೪ ॥

ಚಿತ್ತಜ ಜನಕನು ಶ್ರೀಕೃಷ್ಣ । ಆ
ಉತ್ತಮ ಮಣಿಯನು ಹರಿಕೃಷ್ಣ ॥
ಸತ್ರಾರ್ಜಿತನಿಗೆ ಶ್ರೀಕೃಷ್ಣ । ಹರಿ
ಇತ್ತನು ಹರುಷದಿ ಹರಿಕೃಷ್ಣ ॥ ೧೦೫ ॥

ಸತ್ರಾರ್ಜಿತನೂ ಶ್ರೀಕೃಷ್ಣ । ಪ
ವಿತ್ರಮಣಿಯನೂ ಹರಿಕೃಷ್ಣ ॥
ಸತ್ಯಬಾಮೆಯನು ಶ್ರೀಕೃಷ್ಣ । ಹರಿ
ಗಿತ್ತನು ಭಕ್ತಿಯೊಳ್ಹರಿಕೃಷ್ಣ ॥ ೧೦೬ ॥

ಚರಣಕೆ ಯೆರಗುತ ಶ್ರೀಕೃಷ್ಣ । ಬಹು
ವಿನಯದಿ ಪ್ರಾರ್ಥಿಪೆ ಹರಿಕೃಷ್ಣ ॥
ಶರಣರ ಪೊರೆಯೆಂದು ಶ್ರೀಕೃಷ್ಣ । ನಾ
ಸೆರಗೊಡ್ಡಿ ಬೇಡುವೆ ಹರಿಕೃಷ್ಣ ॥ ೧೦೭ ॥

ವರ್ತಕನೊಡಗೂಡಿ ಶ್ರೀಕೃಷ್ಣ । ನೀ
ಅರ್ತಿಯೊಳ್ಬಂದೆಯೊ ಹರಿಕೃಷ್ಣ ॥
ಭಕ್ತರ ಪೊರೆಯಲು ಶ್ರೀಕೃಷ್ಣ । ನೀ
ಚಿತ್ತಜ ಪಿತನೇ ಹರಿಕೃಷ್ಣ ॥ ೧೦೮ ॥

ಮಾರ್ಕಾಂಡೇಯಗೆ ಶ್ರೀಕೃಷ್ಣ । ನಿನ್ನ
ಮಾಯವ ತೋರುತ ಹರಿಕೃಷ್ಣ ॥

ಬಾರಿ ಬಳಲಿಸಿದೆ ಶ್ರೀಕೃಷ್ಣ ॥ ನೀ
ಮೋಹವ ಗೊಳಿಸುತ ಹರಿಕೃಷ್ಣ ॥ ೧೦೯ ॥

ಅಸುರಗೆ ವಂಚಿಸಿ ಶ್ರೀಕೃಷ್ಣ । ನೀ
ಕುಶಲದಿ ಅಮೃತವ ಹರಿಕೃಷ್ಣ ॥
ಸುರರಿಗೆ ಇತ್ತೆಯೊ ಶ್ರೀಕೃಷ್ಣ । ಸ್ತ್ರೀ
ರೂಪವ ಧರಿಸುತ ಹರಿಕೃಷ್ಣ ॥ ೧೧೦ ॥

ಅಸುರನಿಗೆ ವರವ ಶ್ರೀಕೃಷ್ಣ । ಶಿವ
ಸರಸದಿ ನೀಡುತ ಹರಿಕೃಷ್ಣ ॥
ಭರದೊಳ ಗೋಡಲು ಶ್ರೀಕೃಷ್ಣ । ನೀ
ತ್ವರದೊಳು ಬಂಪಿಯೊ ಹರಿಕೃಷ್ಣ ॥ ೧೧೧ ॥

ಭಸ್ಮಾಸುರನನು ಶ್ರೀಕೃಷ್ಣ । ವಿ
ಚಿತ್ರದಿ ನಲಿಯುತ ಹರಿಕೃಷ್ಣ ॥
ಯುಕ್ತಿಯೊಳ್ಕೊಂದೂ ಶ್ರೀ ಕೃಷ್ಣ । ನೀ
ಇಷ್ಟದಿ ಪೊರೆದೆಯೊ ಹರಿಕೃಷ್ಣ ॥ ೧೧೨ ॥

ಅಸುರಗೆ ಗರ್ವವನು ಶ್ರೀಕೃಷ್ಣ । ಶಿವ
ಬ್ರಹ್ಮರು ನೀಡಲು ಹರಿಕೃಷ್ಣ ।
ವರ್ಮವ ಶೋಧಿಸಿ ಶ್ರೀಕೃಷ್ಣ । ನಿ
ರ್ನಾಮವ ಗೈಯುವೆ ಹರಿಕೃಷ್ಣ ॥ ೧೧೩ ॥

ಮೋಹಿನಿ ರೂಪದಿ ಶ್ರೀಕೃಷ್ಣ । ನೀ
ನಾಟ್ಯವ ನಾಡುತ ಹರಿಕೃಷ್ಣ ॥
ಮೋಹವ ಗೊಳಿಸುತ ಶ್ರೀಕೃಷ್ಣ । ಫಣಿ
ಭೂಷಣ ಶಿವನನು ಹರಿಕೃಷ್ಣ ॥ ೧೧೪ ॥

ಮರುಳುಗೊಳಿಸಿದೆಯೊ ಶ್ರೀಕೃಷ್ಣ । ನೀ
ಮುರಹರ ಮಾಧವ ಹರಿಕೃಷ್ಣ ॥
ಪರಿಪರಿ ಬಳಲಿಸಿ ಶ್ರೀಕೃಷ್ಣ । ನಿನ್ನ
ನಿಜವನು ತೋರಿದೆ ಹರಿಕೃಷ್ಣ ॥ ೧೧೫ ॥

ಪರಕಬೀರನೊಳು ಶ್ರೀಕೃಷ್ಣ । ನೀ
ಕರುಣವ ತೋರುತ ಹರಿಕೃಷ್ಣ
ಪರಿಪರಿ ವಸ್ತ್ರವ ಶ್ರೀಕೃಷ್ಣ ॥
ಸರಸದಿ ನೈದೆಯೊ ಹರಿಕೃಷ್ಣ ॥ ೧೧೬ ॥

ಪರಮ ದರಿದ್ರವ ಶ್ರೀಕೃಷ್ಣ । ನೀ
ನಿತ್ತುನೀ ಅನ್ನವ ಹರಿಕೃಷ್ಣ ॥
ಭರದಲಿ ಜೇಡುತ ಶ್ರೀಕೃಷ್ಣ । ನಿ
ತರಳನ ಕೊಲಿಸಿದೆ ಹರಿಕೃಷ್ಣ ॥ ೧೦೭ ॥

ಯುಕ್ತಿಯ ತೋರುತ ಶ್ರೀಕೃಷ್ಣ । ನೀ
ಭಕ್ತನ ಶೋಧಿಸಿ ಹರಿಕೃಷ್ಣ ।
ಪುತ್ರನ ಬದುಕಿಸಿ ಶ್ರೀಕೃಷ್ಣ । ನೀ
ಕೀರ್ತಿಯೊ ಳ್ಪೊರೆದೆಯೊ ಹರಿಕೃಷ್ಣ ॥ ೧೧೮ ॥

ಗುರುಸನ್ನಿಧಿಯೊಳು ಶ್ರೀಕೃಷ್ಣ । ಮನ
ಕರಗುತ ಜೇಡುವೆ ಹರಿಕೃಷ್ಣ ॥
ಹರಿನಿನ್ನ ಸ್ತುತಿಯನು ಶ್ರೀಕೃಷ್ಣ । ಬಹು
ಪರಿಯೊಳು ಭೋಧಿಸು ಹರಿಕೃಷ್ಣ ॥ ೧೧೯ ॥

ಸಿಂಧುಶಯನನೆ ಶ್ರೀಕೃಷ್ಣ । ನಾ
ನೊಂದೆನು ಭವದೊಳು ಹರಿಕೃಷ್ಣ ॥

ವಂದಿಸಿ ಬೇಡುವೆ ಶ್ರೀಕೃಷ್ಣ । ನೀ
ತಂದೆಯಂದದಿ ಪೊರೆ ಹರಿಕೃಷ್ಣ ॥ ೧೨೦ ॥

ಆಶೆಯೊಳ್ಬೇಡುವೆ ಶ್ರೀಕೃಷ್ಣ । ನಿನ್ನ
ದಾಸಿಯುಂದದಿಪೊರೆ ಹರಿಕೃಷ್ಣ ॥
ಭಾಸುರಾಂಗನೇ ಶ್ರೀಕೃಷ್ಣ । ಮನ
ದಾಶೆಯ ಸಲಿಸೊ ಹರಿಕೃಷ್ಣ ॥ ೧೨೧ ॥

ಪಾರ್ಥನ ಕೂಡುತ ಶ್ರೀಕೃಷ್ಣ । ನೀ
ಅರ್ತಿಯೊಳ್ಪೋರೆಯೊ ಹರಿಕೃಷ್ಣ ॥
ಭಕ್ತಸುಧನ್ವನ ಶ್ರೀಕೃಷ್ಣ । ನಿನ್ನ
ಹತ್ತಿರ ಕರೆಯಲು ಹರಿಕೃಷ್ಣ ॥ ೧೨೨ ॥

ಕದನವ ಗೈಸಿದೆ ಶ್ರೀಕೃಷ್ಣ । ಬಹು
ವಿಧದೊಳು ಸರಸದಿ ಹರಿಕೃಷ್ಣ ॥
ಮೋದವ ತೋರುತ ಶ್ರೀಕೃಷ್ಣ । ಬ್ರ
ಹ್ಮಾಸ್ತ್ರದಿ ನೆಲಸಿದೆ ಹರಿಕೃಷ್ಣ ॥ ೧೨೩ ॥

ಭಕ್ತನೊಳ್ಭಕ್ತನ ಶ್ರೀಕೃಷ್ಣ । ನೀ
ಅರ್ತಿಯೊಳ್ಪಾಲಿಸಿದೆ ಹರಿಕೃಷ್ಣ ॥
ಉತ್ತಮ ಪುರುಷನೆ ಶ್ರೀಕೃಷ್ಣ । ನೀ
ಮುಕ್ತಿಯನಿತ್ತೆಯೊ ಹರಿಕೃಷ್ಣ ॥ ೧೨೪ ॥

ರಾಧೆಯ ರೂಪದಿ ಶ್ರೀಕೃಷ್ಣ । ನೀ
ಮೋದದಿ ಪೋಗುತ ಹರಿಕೃಷ್ಣ ॥
ವಿನೋದವ ತೋರುತ ಶ್ರೀಕೃಷ್ಣ । ನೀ
ಸುದತಿಯ ಕೂಡಿದೆ ಹರಿಕೃಷ್ಣ ॥ ೧೨೫ ॥

ಹಗಲಿರುಳೆನಿಸಿದೆ ಶ್ರೀಕೃಷ್ಣ । ಸ್ವಾಮಿ
ನಗಧರ ಮೂರುತಿ ಹರಿಕೃಷ್ಣ ॥
ಬಗೆಬಗೆ ಲೀಲೆಯ ಶ್ರೀಕೃಷ್ಣ । ತೋರಿ
ಹರುಷವ ತೋರಿದೆ ಹರಿಕೃಷ್ಣ ॥ ೧೬ ॥

ಚಂದಗೋಪನೂ ಶ್ರೀಕೃಷ್ಣ । ಬಹು
ಕೆಂಡವ ಕಾರುತ ಹರಿಕೃಷ್ಣ ॥
ಚಂದ್ರಾವಳಿಯನು ಶ್ರೀಕೃಷ್ಣ । ಅಗ್ನಿ
ಕುಂಡದೊಳ್ಹಾಕಲು ಹರಿಕೃಷ್ಣ ॥ ೧೭ ॥

ಸುಂದರ ಮೂರುತಿ ಶ್ರೀಕೃಷ್ಣ । ಅಗ್ನಿ
ಕುಂಡದ ಮಧ್ಯದಿ ಹರಿಕೃಷ್ಣ ॥
ಚಂದ್ರಾವಳಿಯನು ಶ್ರೀಕೃಷ್ಣ । ಎತ್ತಿ
ತಂದೆಯೊ ಹರುಷದಿ ಹರಿಕೃಷ್ಣ ॥ ೧೮ ॥

ಚಂದಗೋಪನೂ ಶ್ರೀಕೃಷ್ಣ । ನಿನ್ನ
ಪಾದಕೆ ಎರಗುತ ಹರಿಕೃಷ್ಣ ॥
ವಂದಿಸಿ ಸ್ತುತಿಸಲು ಶ್ರೀಕೃಷ್ಣ । ನೀ
ಚಂದದಿ ಪೊರೆದೆಯೋ ಹರಿಕೃಷ್ಣ ॥ ೧೯ ॥

ರಾಜರಾಜರೊಳು ಶ್ರೀಕೃಷ್ಣ । ನೀ
ರಾಜಿಸಿ ಮೆರೆಯುವ ಹರಿಕೃಷ್ಣ ॥
ರಾಜಸು ಯಜ್ಞದಿ ಶ್ರೀಕೃಷ್ಣ । ಶಿಶು
ಪಾಲನ ಕೊಂದೆಯೋ ಹರಿಕೃಷ್ಣ ॥ ೨೦ ॥

ಸುದತಿಯ ತಪಕೇ ಶ್ರೀಕೃಷ್ಣ । ಹರಿ
ಮುದದಲಿ ಮೆಚ್ಚುತ ಹರಿಕೃಷ್ಣ ॥

ವರಬೇಡೆಂದನು ಶ್ರೀಕೃಷ್ಣ । ನೀ
ಸುತನಾಗೆಂದಳು ಹರಿಕೃಷ್ಣ ॥ ೧೩೧ ॥

ಪರಮ ಸಂತೋಷದಿ ಶ್ರೀಕೃಷ್ಣ । ಗಂ
ಡಕಿಯಾಗೆನುತಲೆ ಹರಿಕೃಷ್ಣ ॥
ಪರಿಪರಿ ರೂಪದಿ ಶ್ರೀಕೃಷ್ಣ । ನಾ
ನುದಿಸುವೆನೆಂದನು ಹರಿಕೃಷ್ಣ ॥ ೧೩೨ ॥

ಲೀಲಾಜಾಲನೆ ಶ್ರೀಕೃಷ್ಣ । ಸಾ
ಲಿಗ್ರಾಮ ರೂಪದಿ ಹರಿಕೃಷ್ಣ ॥
ಲೀಲೆಯ ತೋರುತ ಶ್ರೀಕೃಷ್ಣ । ಬಹು
ರೂಪದೊಳುದಿಸಿದೆ ಹರಿಕೃಷ್ಣ ॥ ೧೩೩ ॥

ದೊಷವಿದೂರನೆ ಶ್ರೀಕೃಷ್ಣ । ಮಾಯಾ
ಪಾಶದಿ ಸಿಲುಕಿಹೆ ಹರಿಕೃಷ್ಣ ॥
ಪಾಶವ ಬಿಡಿಸುತ ಶ್ರೀಕೃಷ್ಣ । ಜಗ
ದೀಶನೆ ರಕ್ಷಿಸು ಹರಿಕೃಷ್ಣ ॥ ೧೩೪ ॥

ಮಾತಾ ಪಿತರನು ಶ್ರೀಕೃಷ್ಣ । ಬಹು
ರೀತಿಯೊಳ್ಸೇವಿಸಿ ಹರಿಕೃಷ್ಣ ॥
ಶ್ರೀಪತಿ ಪಾದವ ಶ್ರೀಕೃಷ್ಣ । ತಾ
ಸ್ಮರಿಸುತಲಿದ್ದನು ಹರಿಕೃಷ್ಣ ॥ ೧೩೫ ॥

ಭಕ್ತನೊಳ್ಕರುಣದಿ ಶ್ರೀಕೃಷ್ಣ । ಅವ
ನಿಷ್ಟವ ಸಲಿಸಲು ಹರಿಕೃಷ್ಣ ॥
ಇಟ್ಟಿಗೆಯೊಳ್ನಿಂತೆ ಶ್ರೀಕೃಷ್ಣ । ಹರಿ
ವಿಠಲ ಮೂರುತಿ ಹರಿಕೃಷ್ಣ ॥ ೧೩೬ ॥

ಪಂಡರಿನಾಥನೆ ಶ್ರೀಕೃಷ್ಣ । ನಿನ್ನ
ಪಂಡರಿ ಬಾಯಿಯ ಹರಿಕೃಷ್ಣ ॥
ಸುಂದರ ಮೂರುತಿ ಶ್ರೀಕೃಷ್ಣ । ನಿನ
ಗೊಂದಿಸೆ ಪೊರೆದೆಯೊ ಹರಿಕೃಷ್ಣ ॥ ೧೩೭ ॥

ಮುನಿದೂರ್ವಾಸನ ಶ್ರೀಕೃಷ್ಣ । ಬಹು
ಕ್ರೋಧಕೆ ಬೆದರುತ ಹರಿಕೃಷ್ಣ ॥
ಮೊರೆಯಿಡೆ ಕರುಣದಿ ಶ್ರೀಕೃಷ್ಣ ॥ ಅಂಬ
ರೀಷನ ಪೊರೆಯಲು ಹರಿಕೃಷ್ಣ ॥ ೧೩೮ ॥

ಚಕ್ರವನಟ್ಟಲು ಶ್ರೀಕೃಷ್ಣ ।ಮುನಿ
ಬೆನ್ನತ್ತಿ ಪೋಗಲು ಹರಿಕೃಷ್ಣ ॥
ಮುನಿತಾ ಬೆದರುತ ಶ್ರೀಕೃಷ್ಣ । ನಿನ್ನ
ಚರಣಕೆ ಎರಗಿದ ಹರಿಕೃಷ್ಣ ॥ ೧೩೯ ॥

ಕ್ಷಿತಿಜನ ಪಾಲನೆ ಶ್ರೀಕೃಷ್ಣ । ನೀ
ಪತಿತೋದ್ಧಾರಕ ಹರಿಕೃಷ್ಣ ॥
ಹಿತವನು ಬೋಧಿಸು ಶ್ರೀಕೃಷ್ಣ । ಸ
ದ್ಗತಿಯನು ಕರುಣಿಸು ಹರಿಕೃಷ್ಣ ॥ ೧೪೦ ॥

ಅಷ್ಟಮ ಸ್ತ್ರೀಯರ ಶ್ರೀಕೃಷ್ಣ । ನೀ
ಇಷ್ಟದೇವತೆಯು ಹರಿಕೃಷ್ಣ ॥
ಕಷ್ಟದಿ ಬಳಲುವ ಶ್ರೀಕೃಷ್ಣ । ಭಕ್ತ
ರಿಷ್ಟವ ಸಲಿಸೋ ಹರಿಕೃಷ್ಣ ॥ ೧೪೧ ॥

# ಧ್ರುವ ಬಾಲಕನ ಕಥೆ.

ಧ್ರುವನೊಳು ಕರುಣದಿ ಶ್ರೀಕೃಷ್ಣ । ನೀ
ಸಭೆಯಲಿ ಸುರುಚಿಯೊಳ್ಹರಿಕೃಷ್ಣ ॥
ಬಿರುನುಡಿ ನುಡಿಸಿದೆ ಶ್ರೀಕೃಷ್ಣ । ನೀ
ತರಳನ ಪೊರೆಯಲು ಹರಿಕೃಷ್ಣ ॥ ೧೪೨ ॥

ತರಳನು ದುಃಖದಿ ಶ್ರೀಕೃಷ್ಣ । ನಿನ್ನ
ನರಸುತ ಕಾಡಿಗೆ ಹರಿಕೃಷ್ಣ ॥
ತೆರಳಲು ನಾರದ ಶ್ರೀಕೃಷ್ಣ । ಸ್ವಾಮಿ
ಮುನಿಯನು ತೋರಿದೆ ಹರಿಕೃಷ್ಣ ॥ ೧೪೩ ॥

ಗೂರೂಪದೇಶದಿ ಶ್ರೀಕೃಷ್ಣ । ನಿನ್ನ
ಹೃದಯದಿ ನಿಲಿಸುತ ಹರಿಕೃಷ್ಣ ॥
ಮುದದಲಿ ಭಜಿಸಲು ಶ್ರೀಕೃಷ್ಣ । ನೀ
ನಿಜವನು ತೋರಿದೆ ಹರಿಕೃಷ್ಣ ॥ ೧೪೪ ॥

ವರವನು ನೀಡುತ ಶ್ರೀಕೃಷ್ಣ । ರಾಜ
ಪದವಿಯ ನೀಡುತ ಹರಿಕೃಷ್ಣ ॥
ಹರುಷದಿ ಸಲಹಿದೆ ಶ್ರೀಕೃಷ್ಣ । ಧ್ರುವ
ಪದವಿಯ ನಿತ್ತೆಯೆ ಹರಿಕೃಷ್ಣ ॥ ೧೪೫ ॥

ಧ್ರುವನಾರಾಯಣ ಶ್ರೀಕೃಷ್ಣ । ಕರಿ
ವರದ ನಾರಾಯಣ ಹರಿಕೃಷ್ಣ ॥
ಪೊರೆ ನಾರಾಯಣ ಶ್ರೀಕೃಷ್ಣ । ನಿನ್ನ
ಚರಣಕೆ ಎರಗುವೆ ಹರಿಕೃಷ್ಣ ॥ ೧೪೬ ॥

## ಭಾರತದಲ್ಲಿ ಪಾಂಡವರನ್ನು ಎತ್ತಿ ಪೊರೆದ ಶ್ರೀಕೃಷ್ಣ.

ಪಾಂಡವ ಪಕ್ಷನು ಶ್ರೀಕೃಷ್ಣ । ನೀ
ಪುಂಡರಿಕಾಕ್ಷನು ಹರಿಕೃಷ್ಣ ॥
ಗಾಂಡಿವಿಯ ಸಖ ಶ್ರೀಕೃಷ್ಣ । ಭಕ್ತ
ವೃಂದವ ಪೊರೆಯುವ ಹರಿಕೃಷ್ಣ ॥ ೧೪೭ ॥

ಪಾರ್ಥನ ಕೈಯೊಳು ಶ್ರೀಕೃಷ್ಣ ॥ ನೀ
ಆರ್ತಿಯೊಳ ದ್ರುಪದನ ಹರಿಕೃಷ್ಣ ॥
ಗರ್ವವ ಮುರಿಯುತ ಶ್ರೀಕೃಷ್ಣ । ನೀ
ಸರಸವ ತೋರಿದೆ ಹರಿಕೃಷ್ಣ ॥ ೧೪೮ ॥

ದ್ರೋಣನ ಮಂಚಕೆ ಶ್ರೀಕೃಷ್ಣ । ನೀ
ಪ್ರೇಮದಿ ಕಟ್ಟಿಸಿ ಹರಿಕೃಷ್ಣ ॥
ದ್ರೋಣನ ವಚನವ ಶ್ರೀಕೃಷ್ಣ । ಪರಿ
ಪಾಲಿಸಿದೆಯೊ ನೀ ಹರಿಕೃಷ್ಣ ॥ ೧೪೯ ॥

ಭಕ್ತನ ವಾಕ್ಯವ ಶ್ರೀಕೃಷ್ಣ । ಹರಿ
ಇಷ್ಟದಿ ಸಲಿಸುತ ಹರಿಕೃಷ್ಣ ॥
ಪಾರ್ಥನ ಕೈಯೊಳು ಶ್ರೀಕೃಷ್ಣ । ಗುರು
ದಕ್ಷಿಣೆ ಕೊಡಿಸಿದೆ ಹರಿಕೃಷ್ಣ ॥ ೧೫೦ ॥

ವಿಶ್ವವ ಪಾಲಿಪ ಶ್ರೀಕೃಷ್ಣ । ನೀ
ವಿಶ್ವವು ಪೊಗಳುವ ಹರಿಕೃಷ್ಣ ।
ವಿಶ್ವದಿ ಮೆರೆಯುವ ಶ್ರೀಕೃಷ್ಣ ॥ ನೀ
ವಿಶ್ವೇಶ್ವರನೇ ಹರಿಕೃಷ್ಣ ॥ ೧೫೧ ॥

ಅರಗಿನ ಮನೆಯೊಳು ಶ್ರೀಕೃಷ್ಣ । ಉರಿ
ಏಳಲು ಕ್ರೋಧದಿ ಹರಿಕೃಷ್ಣ ॥
ಭೀಮನ ಕೈಯ್ಯೊಳು ಶ್ರೀಕೃಷ್ಣ । ನೀ
ಐವರ ಹೊರಿಸಿದೆ ಹರಿಕೃಷ್ಣ ॥ ೧೫೨ ॥

ವನದೊಳಗಿರಿಸುತ ಶ್ರೀಕೃಷ್ಣ । ಭೀಮ
ಅನುಜರನೆಲ್ಲರ ಹರಿಕೃಷ್ಣ ॥
ವಿನಯದಿ ಕಾಯುತ ಶ್ರೀಕೃಷ್ಣ । ತಾ
ಕುಳಿತಿರೆ ಬಂದಳು ಹರಿಕೃಷ್ಣ ॥ ೧೫೩ ॥

ಬರುತಲೆ ಕಂಡಳು ಶ್ರೀಕೃಷ್ಣ । ಭೀಮ
ಸುಂದರ ರೂಪವ ಹರಿಕೃಷ್ಣ ॥
ಇಂದುಮುಖಿಯು ತಾ ಶ್ರೀಕೃಷ್ಣ । ಮೋಹ
ದಿಂದ ವಂದಿಸಿದಳು ಹರಿಕೃಷ್ಣ ॥ ೧೫೪ ॥

ಭೀಮನು ಕಂಡನು ಶ್ರೀಕೃಷ್ಣ । ಆ
ಘೋರ ರಕ್ಕಸಿಯ ಹರಿಕೃಷ್ಣ ॥
ದೂರ ನಿಲ್ಲೆಂದನು ಶ್ರೀಕೃಷ್ಣ । ಬಹು
ಕ್ರೋಧವ ತಾಳುತ ಹರಿಕೃಷ್ಣ ॥ ೧೫೫ ॥

ಇಂದು ವದನೆತಾ ಶ್ರೀಕೃಷ್ಣ । ಬಹು
ಸುಂದರ ರೂಪದಿ ಹರಿಕೃಷ್ಣ ॥
ಬಂದು ಎಲ್ಲರಿಗು ಶ್ರೀಕೃಷ್ಣ । ತಾ
ವಂದಿಸಿ ನುಡಿದಳು ಹರಿಕೃಷ್ಣ ॥ ೧೫೬ ॥

ಅರ್ತಿಯೊಳ್ಬಂದೆನು ಶ್ರೀಕೃಷ್ಣ । ಬಹು
ಪ್ರಾರ್ಥಿಸಿ ಬೇಡುವೆ ಹರಿಕೃಷ್ಣ ॥

ಘಾತಿಸದೆನ್ನನು ಶ್ರೀಕೃಷ್ಣ । ಬಹು
ಪ್ರೀತಿಸು ಎಂದಳು ಹರಿಕೃಷ್ಣ ॥ ೧೫೭ ॥

ಭರದೊಳು ಭೀಮನ ಶ್ರೀಕೃಷ್ಣ । ವಿನ
ಯದಿ ಬೇಡುತಲಿರೆ ಹರಿಕೃಷ್ಣ ॥
ತ್ವರದೊಳು ನಾರದ ಶ್ರೀಕೃಷ್ಣ । ತಾ
ಸರಸದಿ ಬಂದನು ಹರಿಕೃಷ್ಣ ॥ ೧೫೮ ॥

ನಾರದ ಭೀಮನೊಳ್ ಶ್ರೀಕೃಷ್ಣ । ನೀ
ಪ್ರೇಮದಿ ತರಳೆಯ ಹರಿಕೃಷ್ಣ ॥
ವರಿಸು ನೀನೆಂದನು ಶ್ರೀಕೃಷ್ಣ । ಮುಂದೆ
ಶುಭವಾಗುವದೆಂದು ಹರಿಕೃಷ್ಣ ॥ ೧೫೯ ॥

ಗುರುವಿನವಚನವ ಶ್ರೀಕೃಷ್ಣ । ಭೀಮ
ಪರಿಪಾಲಿಸುತಲಿ ಹರಿಕೃಷ್ಣ ॥
ಹರುಷದೊಳಿರುತಿರೆ ಶೀಕೃಷ್ಣ । ಅತೀ
ಭರದೊಳು ಬಂದನು ಹರಿಕೃಷ್ಣ ॥ ೧೬೦ ॥

ದಿಂಡಹಿಡಂಬನು ಶ್ರೀಕೃಷ್ಣ । ಬಹು
ಕೆಂಡ ಕೋಪದೊಳು ಹರಿಕೃಷ್ಣ ॥
ಬಂದು ಕದನಗೈಯ್ಯೆ ಶ್ರೀಕೃಷ್ಣ । ಭೀಮ
ನಿಂದೆಲೆ ಕೊಲಿಸಿದೆ ಹರಿಕೃಷ್ಣ ॥ ೧೬೧ ॥

ಕರುಣ ಸಾಗರನೆ ಶ್ರೀಕೃಷ್ಣ । ನಿನ್ನ
ಶರಣರನೆಲ್ಲರ ಹರಿಕೃಷ್ಣ ॥
ಭರದೊಳು ಕಾಯುತ ಶ್ರೀಕೃಷ್ಣ । ನೀ
ಹರುಷವ ತೋರುವೆ ಹರಿಕೃಷ್ಣ ॥ ೧೬೨ ॥

ಸಂಧಿಗೆ ಪೋಗುತ ಶ್ರೀಕೃಷ್ಣ । ಗರ್ವ
ಭಂಗವ ಮಾಡಿದೆ ಹರಿಕೃಷ್ಣ ॥
ಅಂಧನೊಳ್ಕರುಣದಿ ಶ್ರೀಕೃಷ್ಣ । ನಿನ್ನ
ಚಂದವ ತೋರಿದೆ ಹರಿಕೃಷ್ಣ ॥ ೧೬೩ ॥

ವಿದುರನ ಕೈಯ್ಯೊಳ್ ಶ್ರೀಕೃಷ್ಣ । ಬಿಲ್
ಮುರಿಸಿದೆ ಹರುಷದಿ ಹರಿಕೃಷ್ಣ ॥
ಸುದತಿಯ ವಚನವ ಶೀಕೃಷ್ಣ । ನೀ
ಪರಿಪಾಲಿಸಿದೆಯೊ ಹರಿಕೃಷ್ಣ ॥ ೧೬೪ ॥

ಶ್ರೇಷ್ಠ ಮೂರುತಿಯೆ ಶ್ರೀಕೃಷ್ಣ । ನಿನ್ನ
ಕಟ್ಟಲು ಬರಲೂ ಹರಿಕೃಷ್ಣ ॥
ಅಟ್ಟಹಾಸದೊಳು ಶ್ರೀಕೃಷ್ಣ । ಬಹು
ಕೃಷ್ಣರ ತೋರಿದೆ ಹರಿಕೃಷ್ಣ ॥ ೧೬೫ ॥

ಯತಿವೇಷವನೂ ಶ್ರೀಕೃಷ್ಣ ॥ ತಾ
ಧರಿಸುತ ಪಾರ್ಥನು ಹರಿಕೃಷ್ಣ ॥
ಸರಸದಿ ಬರಲೂ ಶ್ರೀಕೃಷ್ಣ । ನೀ
ಹರುಷವ ತೋರಿದೆ ಹರಿಕೃಷ್ಣ ॥ ೧೬೬ ॥

ಸತಿ ಸೌಭದ್ರೆಯ ಶ್ರೀಕೃಷ್ಣ ॥ ಯತಿ
ಸೇವೆಗೆ ಇರಿಸುತ ಹರಿಕೃಷ್ಣ ॥
ಅತಿ ಹರುಷದಲೀ ಶ್ರೀಕೃಷ್ಣ । ಅವ
ನಿಷ್ಟವ ಸಲಿಸಿದೆ ಹರಿಕೃಷ್ಣ ॥ ೧೬೭ ॥

ತಂಗಿಯ ಕೊಟ್ಟೊ ಶ್ರೀಕೃಷ್ಣ । ಬಂ
ಧುತ್ವವ ಬೆಳಸಿದೆ ಹರಿಕೃಷ್ಣ ॥

ನಂದನ ಕಂದನೆ ಶ್ರೀಕೃಷ್ಣ । ನೀ
ಪಾಂಡವ ಪ್ರಿಯನೇ ಹರಿಕೃಷ್ಣ ॥ ೧೬೮ ॥

ಸಂಧಿಯ ಮುರಿಯುತ ಶ್ರೀಕೃಷ್ಣ । ಭೂ
ಬಂಧನ ಬಿಡಿಸಲು ಹರಿಕೃಷ್ಣ ॥
ಪಾರ್ಥನೊಳ್ಕರುಣದಿ ಶ್ರೀಕೃಷ್ಣ ॥ ಸೂ
ತತ್ವವ ನಡಿಸಿದೆ ಹರಿಕೃಷ್ಣ । ೧೬೯ ॥

ಗೀತೆಯ ಬೋಧಿಸಿ ಶ್ರೀಕೃಷ್ಣ ॥ ಪರ
ಮಾರ್ಥವ ತಿಳಿಸಿದೆ ಹರಿಕೃಷ್ಣ ॥
ಭೀಷ್ಮನೊಳ್ಕರುಣದಿ ಶ್ರೀಕೃಷ್ಣ ॥ ನೀ
ಚಕ್ರವ ಧರಿಸಿದೆ ಹರಿಕೃಷ್ಣ ॥ ೧೭೦ ॥

ಭಕ್ತನ ವಚನವ ಶ್ರೀಕೃಷ್ಣ । ನೀ
ಅರ್ತಿಯೊಳ್ಳಡಸುತ? ಹರಿಕೃಷ್ಣ ॥
ಚಿತ್ತಜ ಜನಕನೆ ಶ್ರೀಕೃಷ್ಣ । ಸ್ವಾಮಿ
ಉತ್ತಮ ಪುರುಷನೆ ಹರಿಕೃಷ್ಣ ॥ ೧೭೧ ॥

ಭೀಷ್ಮನ ಯುದ್ಧದಿ ಶ್ರೀಕೃಷ್ಣ । ನೀ
ಜಾಣ್ಮೆಯ ತೋರುತ ಹರಿಕೃಷ್ಣ ॥
ಚಿನ್ಮಯ ಮೂರುತಿ ಶ್ರೀಕೃಷ್ಣ । ಧ
ರ್ಮಜನನು ಪೊರೆದೆ ಹರಿಕೃಷ್ಣ ॥ ೧೭೨ ॥

ಪಾಂಡವ ಪಕ್ಷನು ಶ್ರೀಕೃಷ್ಣ । ಶಿ
ಖಂಡಿಯ ನಿಲಿಸೇ ಹರಿಕೃಷ್ಣ ॥
ನೊಂದೂ ಭೀಷ್ಮನು ಶ್ರೀಕೃಷ್ಣ । ರಣ
ರಂಗದಿ ಪೋದನು ಹರಿಕೃಷ್ಣ ॥ ೧೭೩ ॥

ಅಳಿಯನ ಕೊಲಿಸಿದೆ ಶ್ರೀಕೃಷ್ಣ । ನೀ
ಬಳಲುವ ತಂಗಿಗೆ ಹರಿಕೃಷ್ಣ ॥
ವಿನಯವ ಪೇಳುತ ಶ್ರೀಕೃಷ್ಣ । ಜಯ
ದ್ರಥನನು ಕೊಲಿಸಿದೆ ಹರಿಕೃಷ್ಣ ॥ ೧೭೪ ॥

ಭೀಕರ ಯುದ್ಧವ ಶ್ರೀಕೃಷ್ಣ । ಗುರು
ದ್ರೋಣರು ಮಾಡಲು ಹರಿಕೃಷ್ಣ ॥
ದುರ್ವಾಕ್ಯವನೂ ಶ್ರೀಕೃಷ್ಣ । ಧ
ರ್ಮಜನೊಳು ನುಡಿಸಿದೆ ಹರಿಕೃಷ್ಣ ॥ ೧೭೫ ॥

ಧರ್ಮಜನ ವಾಕ್ಯವ ಶ್ರೀಕೃಷ್ಣ । ಕೇಳಿ
ವರ್ಮವತಿಳಿಯಲು ಹರಿಕೃಷ್ಣ ॥
ರಣರಂಗದಿ ತೆರಳಿದ ಶ್ರೀಕೃಷ್ಣ । ಯಮ
ರಾಜನಿದ್ದೆಡೆಗೆ ಹರಿಕೃಷ್ಣ ॥ ೧೭೬ ॥

ದೃಷ್ಟದ್ಯುಮ್ನನೊಳ್ ಶ್ರೀಕೃಷ್ಣ । ನೀ
ದ್ರೋಣನ ದೇಹವ ಹರಿಕೃಷ್ಣ ॥
ಕೊಚ್ಚಿಸಿದೆಯೊ ನೀ ಶ್ರೀಕೃಷ್ಣ । ಬಲು
ಅಟ್ಟಹಾಸದೊಳು ಹರಿಕೃಷ್ಣ ॥ ೧೭೭ ॥

ಸರ್ಪಾಸ್ತ್ರವು ಬರೆ ಶ್ರೀಕೃಷ್ಣ । ನೀ
ಪಾರ್ಥನ ರಥವನು ಹರಿಕೃಷ್ಣ ॥
ವತ್ತುತ ಭೂಮಿಗೆ ಶ್ರೀಕೃಷ್ಣ । ವಿ
ಚಿತ್ರವ ತೋರಿದೆ ಹರಿಕೃಷ್ಣ ॥ ೧೭೮ ॥

ಬ್ರಾಹ್ಮಣ ರೂಪದಿ ಶ್ರೀಕೃಷ್ಣ । ನೀ
ಕರ್ಣಕುಂಡಲವ ಹರಿಕೃಷ್ಣ ॥

ದಾನವ ಜೇಡುತ ಶ್ರೀಕೃಷ್ಣ । ನೀ
ಕರ್ಣನ ಕೊಲಿಸಿದೆ ಹರಿಕೃಷ್ಣ ॥ ೧೭೯ ॥

ಕಾಮಿನಿ ಮುಡಿಯನು ಶ್ರೀಕೃಷ್ಣ । ನೀ
ಪ್ರೇಮದಿ ಕಟ್ಟಿಸಿ ಹರಿಕೃಷ್ಣ ॥
ಭೀಮನ ಕೈಯೊಳು ಶ್ರೀಕೃಷ್ಣ । ಕುರು
ಕುಲವ ಸಂಹರಿಸಿದೆ ಹರಿಕೃಷ್ಣ ॥ ೧೮೦ ॥

ಸಾರಥಿಯಾಗುತ ಶ್ರೀಕೃಷ್ಣ । ಭೂ
ಭಾರವ ನಿಳುಹಿದೆ ಹರಿಕೃಷ್ಣ ॥
ಸೇರುತ ಪಾರ್ಥನೊಳ್ ಶ್ರೀಕೃಷ್ಣ । ನೀ
ತೋರಿದೆ ಮಹಿಮೆಯ ಹರಿಕೃಷ್ಣ ॥ ೧೮೧ ॥

ಗಂಗೆಯ ಸುತನೆಡೆ ಶ್ರೀಕೃಷ್ಣ । ನೀ
ಹಿಂಗದೆ ಪೋಗುತ ಹರಿಕೃಷ್ಣ ॥
ಗಂಗೆಯ ಕೊಡಿಸಿದೆ ಶ್ರೀಕೃಷ್ಣ । ನೀ
ಮಂಗಳ ಮೂರುತಿ ಹರಿಕೃಷ್ಣ ॥ ೧೮೨ ॥

ಸರಳ ಮಂಚದೊಳ್ ಶ್ರೀಕೃಷ್ಣ । ನಿನ್ನ
ಚರಣವ ಸ್ಮರಿಸುತ ಹರಿಕೃಷ್ಣ ॥
ಬಳಲುತಲಿರಲೂ ಶ್ರೀಕೃಷ್ಣ । ಹರಿ
ಪರಮ ದಯಾನಿಧಿ ಹರಿಕೃಷ್ಣ ॥ ೧೮೩ ॥

ಕರುಣವ ತೋರುತ ಶ್ರೀಕೃಷ್ಣ । ನೀ
ಪರಿಪರಿ ನೀತಿಯ ಹರಿಕೃಷ್ಣ ॥
ಸರಸದಿ ಬೋಧಿಸಿ ಶ್ರೀಕೃಷ್ಣ । ನೀ
ಪರುಷವ ತೋರಿದೆ ಹರಿಕೃಷ್ಣ ॥ ೧೮೪ ॥

ಶರಣ ರಕ್ಷಕನೆ ಶ್ರೀಕೃಷ್ಣ । ನೀ
ಕರುಣ ಸಾಗರ ಹರಿಕೃಷ್ಣ ॥
ಪೊರೆಯೊ ನೀ ಅಬಲೆಯ ಶ್ರೀಕೃಷ್ಣ । ನಿನ್ನ
ಚರಿತೆಯ ಬೋಧಿಸು ಹರಿಕೃಷ್ಣ ॥ ೧೮೫ ॥

ಭಕ್ತನ ಪೊರೆಯಲು ಶ್ರೀಕೃಷ್ಣ । ನೀ
ಉತ್ತರೆ ಗರ್ಭದಿ ಹರಿಕೃಷ್ಣ ॥
ಚಕ್ರವ ನಿರಿಸಿದೆ ಶ್ರೀಕೃಷ್ಣ । ನೀ
ಚಕ್ರಾಂಕಿತನೇ ಹರಿಕೃಷ್ಣ ॥ ೧೮೬ ॥

ಅಶ್ವತ್ಥಾಮನ ಶ್ರೀಕೃಷ್ಣ । ನೀ
ಅಸ್ತ್ರವ ಖಂಡಿಸಿ ಹರಿಕೃಷ್ಣ ॥
ರಕ್ಷಿಸಿದೆಯೊ ನೀ ಶ್ರೀಕೃಷ್ಣ । ಪ
ರೀಕ್ಷಿತ ಬಾಲನ ಹರಿಕೃಷ್ಣ ॥ ೧೮೭ ॥

ರಾಜನ ಮಾಡಿದೆ ಶ್ರೀಕೃಷ್ಣ । ನೀ
ಸೋಜಿಗದೊಳು ಶ್ರೀ ಹರಿಕೃಷ್ಣ ॥
ಮೋದವ ತೋರುತ ಶ್ರೀಕೃಷ್ಣ । ಬಹು
ಆದರದಿಂದಲಿ ಹರಿಕೃಷ್ಣ ॥ ೧೮೮ ॥

ಪ್ರಜೆಗಳೊಳ್ಕರುಣದಿ ಶ್ರೀಕೃಷ್ಣ । ಬಹು
ಮುದದಲಿ ಪೊರೆಯುತ ಹರಿಕೃಷ್ಣ ॥
ಹರಿಯನು ಸ್ಮರಿಸುತ ಶ್ರೀಕೃಷ್ಣ । ತಾ
ಮೆರೆಯುತಲಿದ್ದನು ಹರಿಕೃಷ್ಣ ॥ ೧೮೯ ॥

ಮದಮುಖ ಖಳರನು ಶ್ರೀಕೃಷ್ಣ । ಬಹು
ವಿಧದಲಿ ಖಂಡಿಸಿ ಹರಿಕೃಷ್ಣ ॥

ವಿನಯವ ತೋರುತ ಶ್ರೀಕೃಷ್ಣ । ಜ್ಞಾ
ನಿಗಳೊಡನಾಡುತ ಹರಿಕೃಷ್ಣ ॥ ೧೯೦ ॥

ರಾಜ್ಯವನಾಳುತ ಶ್ರೀಕೃಷ್ಣ । ಸಂ
ತೋಷದೋರುತಿರೆ ಹರಿಕೃಷ್ಣ ॥
ಸೋಜಿಗ ತೋರಿದೆ ಶ್ರೀಕೃಷ್ಣ । ನೀ
ಮೂಜಗದೊಡೆಯನೆ ಹರಿಕೃಷ್ಣ ॥ ೧೯೧ ॥

ಇರುತಿರಲೊಂದಿನ ಶ್ರೀಕೃಷ್ಣ । ಕಲಿ
ಬರಲದ ಕಾಣುತ ಹರಿಕೃಷ್ಣ ॥
ತ್ವರಪಲಿ ಕಟ್ಟುತ ಶ್ರೀಕೃಷ್ಣ । ರಾಜ್ಯ
ಹರುಷದೊಳಾಡಿದ ಹರಿಕೃಷ್ಣ ॥ ೧೯೨ ॥

ಕಾಲವು ತೀರಲು ಶ್ರೀಕೃಷ್ಣ । ಬಹು
ಲೀಲೆಯ ತೋರುತ ಹರಿಕೃಷ್ಣ ॥
ಜೀಟಿಯ ನೆಪದಲಿ ಶ್ರೀಕೃಷ್ಣ । ಮುನಿ
ಶಾಪವ ಕೊಡಿಸಿದೆ ಹರಿಕೃಷ್ಣ ॥ ೧೯೩ ॥

ಶಾಪದಿ ಸಿಕ್ಕೀ ಶ್ರೀಕೃಷ್ಣ । ಬಹು
ರೀತಿಯೊಳ್ಬಳಲುತ ಹರಿಕೃಷ್ಣ ॥
ಪಾರ್ಥಸಾರಥಿಯೆ ಶ್ರೀಕೃಷ್ಣ । ನಿನ್ನ
ಪ್ರಾರ್ಥಿಸಿ ಬೇಡಲು ಹರಿಕೃಷ್ಣ ॥ ೧೯೪ ॥

ಸೂತನ ಕಳುಹಿಸಿ ಶ್ರೀಕೃಷ್ಣ । ಭಾ
ಗವತನು ಬೋಧಿಸಿ ಹರಿಕೃಷ್ಣ ॥
ಪ್ರೀತಿಯ ತೋರಿದೆ ಶ್ರೀಕೃಷ್ಣ । ನೀ
ಶ್ವೇತವಾಹನನೆ ಹರಿಕೃಷ್ಣ ॥ ೧೯೫ ॥

ಅದ್ಭುತ ಮಹಿಮನೆ ಶ್ರೀಕೃಷ್ಣ । ಸರ್ವ
ರುದ್ಧಾರಕನೇ ಹರಿಕೃಷ್ಣ ॥
ನಾಮಾಮೃತವನು ಶ್ರೀಕೃಷ್ಣ । ನೀ
ಪ್ರೇಮದಿ ನೀಡಿದೆ ಹರಿಕೃಷ್ಣ ॥ ೧೬ ॥

ಭಕ್ತವತ್ಸಲನೆ ಶ್ರೀಕೃಷ್ಣ । ನೀ
ಮುಕ್ತಿಯ ನೀಡುತ ಹರಿಕೃಷ್ಣ ॥
ಅರ್ತಿಯೊಳ್ಪೊರೆದೆಯೊ ಶ್ರೀಕೃಷ್ಣ । ಪ
ರೀಕ್ಷಿತ ರಾಜನ ಹರಿಕೃಷ್ಣ ॥ ೧೭ ॥

# ನಮೋ ಭಗವತೇ ವಾಸುದೇವಾಯ

ವಾಸುದೇವನೆ ಶ್ರೀಕೃಷ್ಣ । ನೀ
ಪೊಷಿಸುತೆಲ್ಲರ ಹರಿಕೃಷ್ಣ ॥
ಆಶೆಯ ಸಲಿಸೊ ಶ್ರೀಕೃಷ್ಣ । ಹರಿ
ಕೇಶವ ಮೂರುತಿ ಹರಿಕೃಷ್ಣ ॥ ೧೮ ॥

ಪಾವನ ಮೂರುತಿ ಶ್ರೀಕೃಷ್ಣ । ನಿನ್ನ
ಪ್ರೇಮದಿ ಪಾಡುವೆ ಹರಿಕೃಷ್ಣ ॥
ಕಾಮಿತ ವೀಯೊ ಶ್ರೀಕೃಷ್ಣ । ನಾ
ರಾಯಣ ಮೂರುತಿ ಹರಿಕೃಷ್ಣ ॥ ೧೯ ॥

ದಾನಿಯು ನೀನ್ಪೈ ಶ್ರೀಕೃಷ್ಣ । ನೀ
ದೀನರೊಳ್ಕರುಣದಿ ಹರಿಕೃಷ್ಣ ॥

ಮಾನವ ಕ್ಯಾದೆಯೊ ಶ್ರೀಕೃಷ್ಣ । ಹರಿ
ಮಾಧವ ಮೂರುತಿ ಹರಿಕೃಷ್ಣ ॥ ೨೦೦ ॥

ಸುಂದರ ಮೂರುತಿ ಶ್ರೀಕೃಷ್ಣ । ಮುನಿ
ವೃಂದಗಳರಸನೆ ಹರಿಕೃಷ್ಣ ॥
ಸಿಂಧುಶಯನನೇ ಶ್ರೀಕೃಷ್ಣ । ಗೋ
ವಿಂದಮೂರುತಿಯೆ ಹರಿಕೃಷ್ಣ ॥ ೨೦೧ ॥

ಅಷ್ಟಮಿ ರಾತ್ರೆಯೊಳ್ ಶ್ರೀಕೃಷ್ಣ । ನೀ
ಇಷ್ಟದಿ ಜನಿಸಿದೆ ಹರಿಕೃಷ್ಣ ॥
ಸೃಷ್ಟಿಪಾಲಕನೆ ಶ್ರೀಕೃಷ್ಣ । ಪರ
ವಿಷ್ಣುಮೂರುತಿಯೆ ಹರಿಕೃಷ್ಣ ॥ ೨೦೨ ॥

ಮದನ ಜನಕನೇ ಶ್ರೀಕೃಷ್ಣ । ನಿನ್ನ
ಮುದದಿ ಭಜಿಸುವೆನು ಹರಿಕೃಷ್ಣ ॥
ಮೋದವ ತೋರುತ ಶ್ರೀಕೃಷ್ಣ । ಮಧು
ಸೂದನನೇ ಪೊರೆ ಹರಿಕೃಷ್ಣ ॥ ೨೦೩ ॥

ಶಕ್ರನಿಗೊಲಿದೆಯೊ ಶ್ರೀಕೃಷ್ಣ । ನೀ
ಚಕ್ರವ ಪಿಡಿದೆಯೊ ಹರಿಕೃಷ್ಣ ॥
ಅಕ್ರೂರ ವರದನೆ ಶ್ರೀಕೃಷ್ಣ । ತ್ರಿ
ವಿಕ್ರಮ ಮೂರುತಿ ಹರಿಕೃಷ್ಣ ॥ ೨೦೪ ॥

ದಾನವ ಬಲಿಯೊಳು ಶ್ರೀಕೃಷ್ಣ । ಭೂ
ದಾನವ ಬೇಡುತ ಹರಿಕೃಷ್ಣ ॥
ಪ್ರೇಮದಿ ಪೊರೆದೇ ಶ್ರೀಕೃಷ್ಣ । ನೀ
ವಾಮನ ಮೂರುತಿ ಹರಿಕೃಷ್ಣ ॥ ೨೦೫ ॥

ಸೋದರ ಮಾವನ ಶ್ರೀಕೃಷ್ಣ । ನೀ
ಮೋದದಿ ಕೊಂದೆಯೊ ಹರಿಕೃಷ್ಣ ॥
ಸಾಧುಗಳರಸನೆ ಶ್ರೀಕೃಷ್ಣ । ಹರಿ
ಶ್ರೀಧರ ಮೂರುತಿ ಹರಿಕೃಷ್ಣ ॥ ೨೦೬ ॥

ಶಶಿಮುಖಿಯರ ಕೂಡಿ ಶ್ರೀಕೃಷ್ಣ । ನೀ
ಕುಶಲದಿ ನಲಿಯುವ ಹರಿಕೃಷ್ಣ ॥
ಯಶೋದೆ ಕಂದನೆ ಶ್ರೀಕೃಷ್ಣ । ಹೃಷಿ
ಕೇಶವ ಮೂರುತಿ ಹರಿಕೃಷ್ಣ ॥ ೨೦೭ ॥

ಮಧ್ವಮುನಿಗೊಲಿದ ಶ್ರೀಕೃಷ್ಣ । ಸರ್ವ
ರುದ್ಧಾರಕನೇ ಹರಿಕೃಷ್ಣ ।
ಮುದ್ದು ಮುಖವ ತೊರೋ ಶ್ರೀಕೃಷ್ಣ । ಸ್ವಾಮಿ
ಪದ್ಮನಾಭನೆ ಹರಿಕೃಷ್ಣ ॥ ೨೦೮ ॥

ರಾಧಾರಮಣನೇ ಶ್ರೀಕೃಷ್ಣ । ನಿನ್ನ
ಪಾದಕೆ ಎರಗುವೆ ಹರಿಕೃಷ್ಣ ॥
ಮೋದವ ತೊರೋ ಶ್ರೀಕೃಷ್ಣ । ದಾ
ಮೋದರ ಮೂರುತಿ ಹರಿಕೃಷ್ಣ ॥ ೨೦೯ ॥

ಕ್ಲೇಶವ ಕಳೆಯೋ ಶ್ರೀಕೃಷ್ಣ । ನಿನ್ನ
ಆಶೆಯೊಳ್ಭಜಿಪೆನು ಹರಿಕೃಷ್ಣ ॥
ಪೋಷಿಸು ಕರುಣದಿ ಶ್ರೀಕೃಷ್ಣ । ಹರಿ
ವಾಸುದೇವನೇ ಹರಿಕೃಷ್ಣ ॥ ೨೧೦ ॥

ಶಂಕರ ಸುರನುತ ಶ್ರೀಕೃಷ್ಣ । ಸರ್ವಾ
ಲಂಕಾರ ಭೂಷಿತ ಹರಿಕೃಷ್ಣ ॥

ಕಿಂಕರರನು ಪೊರೆ ಶ್ರೀಕೃಷ್ಣ । ಸಂ
ಕರ್ಷಣ ಮೂರುತಿ ಹರಿಕೃಷ್ಣ ॥ ೨೧೧ ॥

ಉದ್ಧರಿಸೋ ನೀ ಶ್ರೀಕೃಷ್ಣ । ಅಡ್ಡ
ಬಿದ್ದು ನಾ ಬೇಡುವೆ ಹರಿಕೃಷ್ಣ ॥
ತಿದ್ದೆನ್ನ ಮನವನು ಶ್ರೀಕೃಷ್ಣ । ಪ್ರ
ದ್ಯುಮ್ನ ಮೂರುತಿಯೆ ಹರಿಕೃಷ್ಣ ॥ ೨೧೨ ॥

ಉದ್ದವ ಸಖನೇ ಶ್ರೀಕೃಷ್ಣ । ಮುದ್ದು
ರುಕ್ಮಿಣಿ ಅರಸನೇ ಹರಿಕೃಷ್ಣ ॥
ಶುದ್ಧ ಸ್ವರೂಪನೆ ಶ್ರೀಕೃಷ್ಣ । ಅನಿ
ರುದ್ಧ ಮೂರುತಿಯೆ ಹರಿಕೃಷ್ಣ ॥ ೨೧೩ ॥

ಶೇಷಗಿರೀಶನೆ ಶ್ರೀಕೃಷ್ಣ । ನೀ
ಶೇಷಶಾಯಿಯೇ ಹರಿಕೃಷ್ಣ ॥
ದೋಷವಿದೂರನೆ ಶ್ರೀಕೃಷ್ಣ । ಪುರು
ಷೋತ್ತಮನೇ ಪೊರೆ ಹರಿಕೃಷ್ಣ ॥ ೨೧೪ ॥

ಅಕ್ಷಯ ರೂಪನೆ ಶ್ರೀಕೃಷ್ಣ । ನೀ
ಪಕ್ಷಿವಾಹನನೆ ಹರಿಕೃಷ್ಣ ॥
ಲಕ್ಷ್ಮೀರಮಣನೆ ಶ್ರೀಕೃಷ್ಣ । ಅ
ಧೋಕ್ಷಜ ಮೂರುತಿ ಹರಿಕೃಷ್ಣ ॥ ೨೧೫ ॥

ನಂಬಿದ ಬಾಲನ ಶ್ರೀಕೃಷ್ಣ । ನೀ
ಬಂಧನ ಬಿಡಿಸಲು ಹರಿಕೃಷ್ಣ ॥
ಕಂಭದಿ ಬಂದೆಯೊ ಶ್ರೀಕೃಷ್ಣ । ನರ
ಸಿಂಹ ಮೂರುತಿಯೆ ಹರಿಕೃಷ್ಣ ॥ ೨೧೬ ॥

ಸಚ್ಚರಿತನು ನೀ ಶ್ರೀಕೃಷ್ಣ । ನೀ
ನೆಚ್ಚಿನ ಭಜಕರ ಹರಿಕೃಷ್ಣ ॥
ಇಚ್ಛೆಯ ಸಲಿಸುವ ಶ್ರೀಕೃಷ್ಣ । ಸ್ವಾಮಿ
ಅಚ್ಯುತ ಮೂರುತಿ ಹರಿಕೃಷ್ಣ ॥ ೨೧೭ ॥

ಜಾಹ್ನವಿ ಜನಕನೆ ಶ್ರೀಕೃಷ್ಣ । ಸು
ಜ್ಞಾನಿಗಳರಸನೆ ಹರಿಕೃಷ್ಣ ॥
ಜ್ಞಾನೋದ್ಧಾರಕ ಶ್ರೀಕೃಷ್ಣ । ಜ
ನಾರ್ದನ ಮೂರುತಿ ಹರಿಕೃಷ್ಣ ॥ ೨೧೮ ॥

ವಂದಿಪೆ ನಿನ್ನನು ಶ್ರೀಕೃಷ್ಣ । ನೀ
ಇಂದಿರೆಯರಸನೆ ಹರಿಕೃಷ್ಣ ॥
ಬಂದೆನ್ನ ಪೊರೆಯೋ ಶ್ರೀಕೃಷ್ಣ । ಉ
ಪೇಂದ್ರ ಮೂರುತಿಯೆ ಹರಿಕೃಷ್ಣ ॥ ೨೧೯ ॥

ಕರುಣದ ಕವಚವ ಶ್ರೀಕೃಷ್ಣ । ಯನ್ನ
ಹರಣಕೆ ತೊಡಿಸೈ ಹರಿಕೃಷ್ಣ ॥
ಮರಣ ಸಮಯದಲಿ ಶ್ರೀಕೃಷ್ಣ । ಹರಿ
ಸ್ಮರಣೆಯ ಕರುಣಿಸೊ ಹರಿಕೃಷ್ಣ ॥ ೨೨೦ ॥

ದುಷ್ಟಸಂಹಾರನೆ ಶ್ರೀಕೃಷ್ಣ । ನೀ
ಶಿಷ್ಟರ ಪೊರೆಯುವ ಹರಿಕೃಷ್ಣ ॥
ಇಷ್ಟದ ದೇವತೆ ಶ್ರೀಕೃಷ್ಣ ॥ ಶ್ರೀ
ಕೃಷ್ಣಮೂರುತಿಯೆ ಹರಿಕೃಷ್ಣ ॥ ೨೨೧ ॥

ಉತ್ತಮ ಪುರುಷನೆ ಶ್ರೀಕೃಷ್ಣ । ಎನ್ನ
ಚಿತ್ತವ ಬೆಳಗಿಸೊ ಹರಿಕೃಷ್ಣ ।

ನಿತ್ಯದಿ ನೆನೆಯುವೆ ಶ್ರೀಕೃಷ್ಣ । ಎನ್ನ
ಹತ್ತಿರ ಬಾರೈ ಹರಿಕೃಷ್ಣ ॥ ೨೨ ॥

ಗೋವರ್ಧನಧರ ಶ್ರೀಕೃಷ್ಣ । ಗೋಪ
ಸ್ತ್ರೀಯರ ಅರಸನೆ ಹರಿಕೃಷ್ಣ ॥
ಗೋಕುಲನಾಥನೆ ಶ್ರೀಕೃಷ್ಣ । ನಿನ್ನ
ಪ್ರಾರ್ಥಿಪೆನನುದಿನ ಹರಿಕೃಷ್ಣ ॥ ೨೩ ॥

ಮುಚುಕುಂದವರದ ಶ್ರೀಕೃಷ್ಣ ।
ಮುಕುಂದ ಮುರಾರಿಯೆ ಹರಿಕೃಷ್ಣ ॥
ಮುನಿಜನ ಪೂಜಿತ ಶ್ರೀಕೃಷ್ಣ । ಮುನಿ
ಮನದಲಿ ನಲಿಯುವ ಹರಿಕೃಷ್ಣ ॥ ೨೪ ॥

ಮದನ ಜನಕನೇ ಶ್ರೀಕೃಷ್ಣ । ಪರಿ
ಮುದದಲಿ ಪ್ರಾರ್ಥಿಪೆ ಹರಿಕೃಷ್ಣ ॥
ಮೋದವ ತೋರುತ ಶ್ರೀಕೃಷ್ಣ । ನೀ
ಪೊರೆಯೊ ದಯಾನಿಧಿ ಹರಿಕೃಷ್ಣ ॥ ೨೫ ॥

ಪರಮ ಪುರುಷನೇ ಶ್ರೀಕೃಷ್ಣ । ಬಹು
ವಿನಯದಿ ಬೇಡುತ ಹರಿಕೃಷ್ಣ ॥
ಚರಣಕೆ ಎರಗುವೆ ಶ್ರೀಕೃಷ್ಣ । ಎನ್ನ
ಮನದಲಿ ನೆಲಸೊ ಹರಿಕೃಷ್ಣ ॥ ೨೬ ॥

ಪಾರ್ಥಸಾರಥಿಯೆ ಶ್ರೀಕೃಷ್ಣ । ಸ
ದ್ವರ್ತನೆಯಲ್ಲಿಡು ಹರಿಕೃಷ್ಣ ॥
ಸ್ವಾರ್ಥವ ಬಿಡಿಸೈ ಶ್ರೀಕೃಷ್ಣ । ನಿನ್ನ
ಪ್ರಾರ್ಥಿಪೆನನುದಿನ ಹರಿಕೃಷ್ಣ ॥ ೨೭ ॥

ಭವದೊಳ ಬಂದೆನು ಶ್ರೀಕೃಷ್ಣ । ಬಹು
ಭವಣೆಯಗೊಂಡೆನು ಹರಿಕೃಷ್ಣ ॥
ಬಂಧನ ಬಿಡಿಸೊ ಶ್ರೀಕೃಷ್ಣ । ನೀ
ಚಂದದಿ ಪೊರೆಯೊ ಹರಿಕೃಷ್ಣ ॥ ೨೮ ॥

ಪುಂಡರೀಕ ವರದ ಶ್ರೀಕೃಷ್ಣ । ನೀ
ಪಾಂಡುರಂಗನೇ ಹರಿಕೃಷ್ಣ ॥
ಪಂಡರಪುರದೊಳು ಶ್ರೀಕೃಷ್ಣ ಭಕ್ತ ।
ವೃಂದವ ಪೊರೆಯುವ ಹರಿಕೃಷ್ಣ ॥ ೨೯ ॥

ಪೊಡವಿಗೊಡೆಯನೇ ಶ್ರೀಕೃಷ್ಣ । ನೀ
ಉಡುಪಿಯೊಳ್ನಿಂತಿಹ ಹರಿಕೃಷ್ಣ ॥
ಕಡುಭಕ್ತಗೊಲಿದೂ ಶ್ರೀಕೃಷ್ಣ । ನೀ
ಪಡುಮುಖತಿರಿಗಿದೆ ಹರಿಕೃಷ್ಣ ॥ ೩೦ ॥

ಅಷ್ಟಯತಿಗಳೋಳ್ ಶ್ರೀಕೃಷ್ಣ । ನೀ
ಶ್ರೇಷ್ಟ ಪೂಜೆಗೊಂಬ ಹರಿಕೃಷ್ಣ ॥
ಮುಟ್ಟಿ ಭಜಿಸುವರ ಶ್ರೀಕೃಷ್ಣ । ಮನ
ದಿಷ್ಟವ ಸಲಿಸೊ ಹರಿಕೃಷ್ಣ ॥ ೩೧ ॥

## ದೇವಸನ್ನಿಧಿಯಲ್ಲಿ ದೀನಳ ಮೊರೆ.

ಹಿಂದಿನ ಜನ್ಮದಿ ಶ್ರೀಕೃಷ್ಣ । ಗೋ
ವಿಂದನೆ ನಿನ್ನನು ಹರಿಕೃಷ್ಣ ॥
ಚಂದದಿ ಪೂಜಿಸಿ ಶ್ರೀಕೃಷ್ಣ ॥ ನಾ
ಹೊಂದಿದೆ ನರಜನ್ಮ ಹರಿಕೃಷ್ಣ ॥ ೩೨ ॥

ಮೂಜಗದೊಡೆಯನೆ ಶ್ರೀಕೃಷ್ಣ । ಹರಿ
ಪೂಜ್ಯಮೂರುತಿಯೆ ಹರಿಕೃಷ್ಣ ॥
ಪೂಜ್ಯರ ಉದರದಿ ಶ್ರೀಕೃಷ್ಣ । ನೀ
ಸೃಜಿಸಿದೆ ಎನ್ನನು ಹರಿಕೃಷ್ಣ ॥ ೨೩೩ ॥

ನಳಿಲ ನಾಭನೇ ಶ್ರೀಕೃಷ್ಣ । ನಳಿ
ನಾಕ್ಷಿಯರರಸನೆ ಹರಿಕೃಷ್ಣ ॥
ಇಳೆಯ ಬೆಳಕನೂ ಶ್ರೀಕೃಷ್ಣ । ವಿ
ಳಂಬಿಯೊಳ್ಕಂಡೆನು ಹರಿಕೃಷ್ಣ ॥ ೨೩೪ ॥

ಭವರೋಗಹರನೆ ಶ್ರೀಕೃಷ್ಣ । ನಿನ್ನ
ಚರಣಕೆ ಎರಗುವೆ ಹರಿಕೃಷ್ಣ ॥
ಭಕ್ತವತ್ಸಲನೆ ಶ್ರೀಕೃಷ್ಣ । ನೀ
ಮುಕ್ತಿಪ್ರದಾಯಕ ಹರಿಕೃಷ್ಣ ॥ ೨೩೫ ॥

ಬಿರುನುಡಿ ಕೇಳೀ ಶ್ರೀಕೃಷ್ಣ । ಮನ
ಕರಗುತ ನಿನ್ನೊಳು ಹರಿಕೃಷ್ಣ ॥
ಭರಮೊಳು ಬೇಡಲು ಶ್ರೀಕೃಷ್ಣ । ನೀ
ಕರುಣವ ತೋರಿದೆ ಹರಿಕೃಷ್ಣ ॥ ೨೩೬ ॥

ಕಷ್ಟಕೆ ಅಂಜೆನು ಶ್ರೀಕೃಷ್ಣ । ನೀ
ದುಷ್ಟಳೆನಿಸದಿರು ಹರಿಕೃಷ್ಣ ॥
ಇಷ್ಟೇ ಬೇಡುವೆ ಶ್ರೀಕೃಷ್ಣ । ಪರ
ಮೇಷ್ಟಿಜನಕನೇ ಹರಿಕೃಷ್ಣ ॥ ೨೩೭ ॥

ಕಾಮಜನಕನೇ ಶ್ರೀಕೃಷ್ಣ । ಯನ್ನ
ಸ್ವಾಮಿಯು ಕರುಣದಿ ಹರಿಕೃಷ್ಣ ।

ಸಾಸಿರ ನಾಮವ ಶ್ರೀಕೃಷ್ಣ । ನೀ
ಪ್ರೇಮದಿ ಬರಸಿದೆ ಹರಿಕೃಷ್ಣ ॥ ೨೩೮ ॥

ಪರಿಪರಿಯಲಿನೀ ಶ್ರೀಕೃಷ್ಣ । ನಿನ್ನ
ಚರಿತೆಯ ಪೊಗಳುವ ಹರಿಕೃಷ್ಣ ।
ತೆರದೊಳು ಪದಗಳ ಶ್ರೀಕೃಷ್ಣ । ನಿ
ಬರೆಸಿದೆ ಅಜ್ಞಳೊಳ್ಹರಿಕೃಷ್ಣ ॥ ೨೩೯ ॥

ಭಕ್ತವತ್ಸಲನೆ ಶ್ರೀಕೃಷ್ಣ । ಹರಿ
ಅಲ್ಪಮತಿಯನೂ ಹರಿಕೃಷ್ಣ ॥ ಎತ್ತಿ
ಪೊರೆಯೊ ಎಂದು ಶ್ರೀಕೃಷ್ಣ । ನಾ
ಪ್ರಾರ್ಥಿಪೆನನುದಿನ ಹರಿಕೃಷ್ಣ ॥ ೨೪೦ ॥

ನಿನ್ನಯ ಕರುಣದಿ ಶ್ರೀಕೃಷ್ಣ । ಹರಿ
ಯೆನ್ನೊಳು ಜನಿಸಿದ ಹರಿಕೃಷ್ಣ ॥
ಬಾಲಬಾಲೆಯರ ಶ್ರೀಕೃಷ್ಣ । ಬಹು
ಪ್ರೇಮದಿ ಪೊರೆಯೊ ಹರಿಕೃಷ್ಣ ॥ ೨೪೧ ॥

ನರರ ಸ್ತುತಿಸೆನು ಶ್ರೀಕೃಷ್ಣ । ನಾ
ಪರರ ಬೇಡೆನು ಹರಿಕೃಷ್ಣ ॥
ಪರರ ಬೇಡದಂತೆ ಶ್ರೀಕೃಷ್ಣ । ನೀ
ಪೊರೆ ಕರುಣಾಕರ ಹರಿಕೃಷ್ಣ ॥ ೨೪೨ ॥

ಅನಂತ ಮಹಿಮನೆ ಶ್ರೀಕೃಷ್ಣ । ನೀ
ಅಂತಕ ಭಾದೆಯ ಹರಿಕೃಷ್ಣ ॥
ಚಿಂತೆಯ ಬಿಡಿಸೊ ಶ್ರೀಕೃಷ್ಣ । ನೀ
ಕಂತುಜನಕನೇ ಹರಿಕೃಷ್ಣ ॥ ೨೪೩ ॥

ಲೋಲಲೋಚನನೆ ಶ್ರೀಕೃಷ್ಣ । ಸ್ವಾಮಿ
ಹೇವಿಳಂಬಿಯೊಳ್ ಹರಿಕೃಷ್ಣ ॥
ಮಾಘ ಮಾಸದೊಳು ಶ್ರೀಕೃಷ್ಣ । ನೀ
ದೀನಳೊಳ್ಪರಿಸಿದೆ ಹರಿಕೃಷ್ಣ ॥ ೨೪೪ ॥

ಸರ್ವರ ಹೃದಯಕೆ ಶ್ರೀಕೃಷ್ಣ । ನೀ
ಶಾಂತಿಯ ನೀಡೆಂದು ಹರಿಕೃಷ್ಣ ॥
ಸೆರಗೊಡ್ಡಿ ಬೇಡುವೆ ಶ್ರೀಕೃಷ್ಣ । ನಿನ್ನ
ಶರಣರಂದದಿಪೊರೆ ಹರಿಕೃಷ್ಣ ॥ ೨೪೫ ॥

ದೀನಳೊಳ್ಕರುಣದಿ ಶ್ರೀಕೃಷ್ಣ । ನೀ
ಪ್ರೇಮದಿ ಬರೆಸಿದ ಹರಿಕೃಷ್ಣ ॥
ನಾಮದ ಮಾಲೆಯ ಶ್ರೀಕೃಷ್ಣ । ಯನ್ನ
ಸ್ವಾಮಿಗೊಪ್ಪಿಸುವೆನು ಹರಿಕೃಷ್ಣ ॥ ೨೪೬ ॥

ಅರಿಯದಬಲೆಯೊಳ್ ಶ್ರೀಕೃಷ್ಣ । ನೀ
ಸರಸದಿ ನುಡಿಸಿದ ಹರಿಕೃಷ್ಣ ॥
ಸಾಸಿರ ನಾಮವ ಶ್ರೀಕೃಷ್ಣ । ಸಂ
ತೋಷದಿ ಪಾಡುವೆ ಹರಿಕೃಷ್ಣ ॥ ೨೪೭ ॥

ಹರಿನಿನ್ನ ಸ್ಮರಣೆಯ ಶ್ರೀಕೃಷ್ಣ । ಯನ್ನ
ಮರಣಸಮಯದಲಿ ಹರಿಕೃಷ್ಣ ॥
ಕರುಣಿಸುತೆನ್ನನು ಶ್ರೀಕೃಷ್ಣ । ನೀ
ಪೊರೆಯೊ ಶ್ರೀನರಹರಿ ಹರಿಕೃಷ್ಣ ॥ ೨೪೮ ॥

ರುಕ್ಮಿಣಿ ದೇವಿಯ ಶ್ರೀಕೃಷ್ಣ । ಕ
ರಾರ್ಚಿತ ಪೂಜೆಯ ಹರಿಕೃಷ್ಣ ॥

ಶ್ರೇಷ್ಠ ಚರಣದೆಡೆ ಶ್ರೀಕೃಷ್ಣ । ನೀ
ಕೊಟ್ಟುರಕ್ಷಿಸು ಎನ್ನ ಹರಿಕೃಷ್ಣ ॥ ೨೪ ॥

ಮಂಗಳ ಮೂರುತಿ ಶ್ರೀಕೃಷ್ಣ । ಶುಭ
ಮಂಗಳ ಮಂಗಳ ಹರಿಕೃಷ್ಣ ॥
ಮಂಗಳ ಮಾಡುವೆ ಶ್ರೀಕೃಷ್ಣ । ನಿನ
ಗೊಂದಿಸಿ ಹರುಷದಿ ಹರಿಕೃಷ್ಣ ॥ ೨೫ ॥

ಮಂಗಳಾರತಿಯನು ಶ್ರೀಕೃಷ್ಣ । ನಿನ್ನ
ಅಂಗಕೆ ಬೆಳಗುವೆ ಹರಿಕೃಷ್ಣ ॥
ಮಂಗಳ ಮಂಗಳ ಶ್ರೀಕೃಷ್ಣ । ಜಯ
ಮಂಗಳ ಮಂಗಳ ಹರಿಕೃಷ್ಣ ॥ ೨೬ ॥

ಮಂಗಳ ಮುರಹರ ಶ್ರೀಕೃಷ್ಣ । ಜಯ
ಮಂಗಳ ನಗಧರ ಹರಿಕೃಷ್ಣ ॥
ಅಂಗಜ ಜನಕನೇ ಶ್ರೀಕೃಷ್ಣ ।ಶುಭ
ಮಂಗಳ ಪಾಲಿಸೊ ಹರಿಕೃಷ್ಣ ॥ ೨೭ ॥

ಮಂಗಳ ನರಹರಿ ಶ್ರೀಕೃಷ್ಣ । ಜಯ
ಮಂಗಳ ಗಿರಿಯೊಳು ಹರಿಕೃಷ್ಣ ॥
ಚಂದದಿ ನೆಲೆಸಿಹ ಶ್ರೀಕೃಷ್ಣ । ಶ್ರೀನಿ
ವಾಸಗೆ ಮಂಗಳ ಹರಿಕೃಷ್ಣ ॥ ೨೮ ॥

## ಶ್ರೀ ಕೃಷ್ಣಾರ್ಪಣ ಮಸ್ತು.

